RNI No. KARKAN/2007/22111 ಸಂಪುಟ 13 ಸಂಚಿಕೆ 4 ಡಿಸೆಂಬರ್ 2018 ₹ 20/-



ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# الصراط المستقيم

# ಸಿರಾತೇ ಮುಸ್ತಖೀಮ್

ಜಮೀಯತೇ ಅಹ್ಲೆ ಹದೀಸ್ ಕರ್ನಾಟಕ-ಗೋವಾ ಇದರ ಮುಖವಾಣಿ

ಸತ್ಯವಿಶ್ವಾಸಿಗಳ ಕೈಪಿಡಿ



## ಮೀಟೂ

ಬೇಟೆಯೇ ಬೇಟೆಗಾರನನ್ನು ಬೇಟೆಯಾಡಿದಾಗ!

## ತಕ್ವಾ

ಸಕಲ ಒಳಿತುಗಳ ಮೂಲಕಾರಣ

## ಪತಿ ಪತ್ನಿಯ ಹೃದಯವನ್ನು ಗೆಲ್ಲುವುದು ಹೇಗೆ?



# الصراط المستقيم

ಐಹಿಕ ಮತ್ತು ಪಾರತ್ರಿಕ ವಿಜಯದ ಹಾದಿ

# ಸಿರಾತೇ ಮುಸ್ತಖೀಮ್

ಸತ್ಯವಿಶ್ವಾಸಿಗಳ ಕೈಪಿಡಿ


ಸಂಪುಟ 13 ಸಂಚಿಕೆ 04

ربيع الثاني ١٤٤٠ هـ

**ಡಿಸೆಂಬರ್ 2018**



*ಮಾಲಕರು, ಮುದ್ರಕರು ಮತ್ತು ಪ್ರಕಾಶಕರು:*

**ಮುಹಮ್ಮದ್ ಅಲಿ**

ದಾವಾ ಪಬ್ಲಿಕೇಶನ್ಸ್,
ಹಿರಾ ಕಾಂಪ್ಲೆಕ್ಸ್,
ಡೋರ್ ನಂ. 2-184/11,
2 ನೇ ಬ್ಲಾಕ್, ಕಾಟಿಪಳ್ಳ ಪೋಸ್ಟ್,
ಮಂಗಳೂರು - 575 030

*ಸಂಪಾದಕರು:*

**ಪಿ. ಅಬ್ದುಸ್ಸಲಾಂ ಕಾಟಿಪಳ್ಳ**

Mob: 9986282449
Email: asshahadat@yahoo.co.in

*ಮುಖಪುಟ ವಿನ್ಯಾಸ:*

**ಎ.ಎಸ್ಕೆ.**

*ಮುದ್ರಣ:*

Akshara Printers,
2nd Block, Katipalla,
Mangaluru. D.K.


## ಒಳಪುಟಗಳಲ್ಲಿ

### ಸಂಪಾದಕೀಯ


- ಅನುಗ್ರಹ—ಕೃತಜ್ಞತೆ ಮತ್ತು ಕೃತಘ್ನತೆ ....02


### ಈ ಸಂಚಿಕೆಯಲ್ಲಿ


- ‘ಮೀಟೂ’ ಅಭಿಯಾನ—ಬೇಟೆಯೇ ಬೇಟೆಗಾರನನ್ನು ಬೇಟೆಯಾಡಿದಾಗ... ....07
- ತಕ್ವಾ—ಸಕಲ ಒಳಿತುಗಳ ಮೂಲಕಾರಣ ....10
- ಪ್ರವಾದಿ ಮುಹಮ್ಮದ್(ﷺ)—ಮಾನವತೆಯ ಸಂಪೂರ್ಣ ಮಾದರಿ....20
- ನಿನಗರಿವಿಲ್ಲದೇ ಅಲ್ಲಾಹು ನಿನ್ನನ್ನು ಒಳಿತಿನ ಮೂಲಕ ಪರೀಕ್ಷಿಸಬಹುದು! ....24
- ಆ ದಿನ ದೂರವಿಲ್ಲ!....28
- ಇಸ್ಲಾಮಿನಲ್ಲಿ ಅನ್ಯೋನ್ಯ ಸಂಬಂಧ ಸುಧಾರಣೆಯ ಮಹತ್ವ....33
- ಪತಿ ಪತ್ನಿಯ ಹೃದಯವನ್ನು ಗೆಲ್ಲುವುದು ಹೇಗೆ? ....39
- ವ್ಯಾಪಾರದಲ್ಲಿ ಲಾಭದ ಪರಿಧಿ....44
- ರಬೀಅ್ ಬಿಂತ್ ಮಊರ್ರುಝ್(ರ)....46


### ಸ್ಥಿರ ಶೀರ್ಷಿಕೆಗಳು


- ಹದೀಸ್‌ಗಳಿಂದ....06
- ಜೀವನದ ಸವಿ ಅನುಭವಿಸಿರಿ....31
- ಆದರ್ಶ ನಾರಿಯರ ಸವಿಶೇಷತೆಗಳು ....46



Printed, published & owned by Muhammad Ali, Dawa Publications, Hira Complex, 2-184/11, 2nd Block, Katipalla Post, Mangaluru - 575 030. Editor: P. Abdussalam, Printed at: Akshara Printers, 2nd Block, Katipalla Post, Mangaluru. D. K. KARNATAKA

ಸಂಪಾದಕೀಯ

بسم الله الرحمن الرحيم

الحَمْدُ لِلّٰهِ رَبِّ العَالَمِينَ الصَّلَاةُ وَالسَّلَامُ عَلَى أَفْضَلِ الأَنْبِيَاءِ وَالمُرْسَلِينَ
وَعَلَى آلِهِ وَصَحْبِهِ أَجْمَعِينَ أَمَّا بَعْدُ

# ಅನುಗ್ರಹ—ಕೃತಜ್ಞತೆ ಮತ್ತು ಕೃತಘ್ನತೆ

ಸರ್ವಲೋಕಗಳ ಪಾಲಕಪ್ರಭು ಮಾನವ ಸಮುದಾಯಕ್ಕೆ ದಾನವಿತ್ತ ಅನುಗ್ರಹಗಳನ್ನು ಇಹಲೋಕದಲ್ಲಿ ಲಭಿಸುವ ಯಾವುದಾದರೊಂದು ಮಾನದಂಡವನ್ನಿಟ್ಟುಕೊಂಡು ಅಳೆಯಲು ಸಾಧ್ಯವಿಲ್ಲ. ಪರಮ ದಯಾಮಯನಾದ ಪ್ರಭು ಮನುಷ್ಯರಿಗೆ ನೀಡಿದ ಅನುಗ್ರಹಗಳು ಸಾಪೇಕ್ಷವಾಗಿದೆ. ಒಬ್ಬರಿಗೆ ಲಭಿಸಿದ ಜ್ಞಾನ, ಸಂಪತ್ತು, ಆರೋಗ್ಯ, ಆಯುಷ್ಯ ಮುಂತಾದ ಪ್ರತಿಯೊಂದು ಅನುಗ್ರಹಗಳು ಬೇರೊಬ್ಬನ ಮಟ್ಟಿಗೆ ಕಡಿಮೆಯೋ ಹೆಚ್ಚೋ ಇರಬಹುದು. ಆದರೆ ಇಸ್ಲಾಮ್ ಎಂಬ ಅತ್ಯುನ್ನತವಾದ, ಪವಿತ್ರವಾದ ಅನುಗ್ರಹವನ್ನು ಮಾತ್ರ ಅಲ್ಲಾಹನು ಮನುಷ್ಯ ವರ್ಗಕ್ಕೆ ಪೂರ್ತಿ ಮಾಡಿ ಕೊಟ್ಟಿದ್ದಾನೆ. ಅಲ್ಲಾಹನು ಹೇಳುತ್ತಾನೆ.

﴿ٱلْيَوْمَ أَكْمَلْتُ لَكُمْ دِينَكُمْ وَأَتْمَمْتُ عَلَيْكُمْ نِعْمَتِى وَرَضِيتُ لَكُمُ ٱلْإِسْلَٰمَ دِينًا﴾

“ಇಂದು ನಾನು ನಿಮ್ಮ ಧರ್ಮವನ್ನು ನಿಮಗಾಗಿ ಪರಿಪೂರ್ಣಗೊಳಿಸಿದ್ದೇನೆ. ನನ್ನ ಕೊಡುಗೆಯನ್ನು ನಿಮ್ಮ ಮೇಲೆ ಪರಿಪೂರ್ಣಗೊಳಿಸಿದ್ದೇನೆ ಮತ್ತು ಇಸ್ಲಾಮನ್ನು ನಿಮ್ಮ ಧರ್ಮವಾಗಿ ತೃಪ್ತಿಪಟ್ಟಿದ್ದೇನೆ.” (5:3)

ಸತ್ಯವಿಶ್ವಾಸಿಗಳು ಈ ಮಹೋನ್ನತವಾದ ಆದರ್ಶವನ್ನು ತಿಳಿಯುವ ಮತ್ತು ಅನುಭವಿಸುವ ಭಾಗ್ಯ ಲಭಿಸಿದವರಾಗಿದ್ದಾರೆ. ಆ ಸತ್ಯವಿಶ್ವಾಸಿಗೆ ತನ್ನ ಪ್ರಭುವಿನ ವತಿಯಿಂದ ಲಭಿಸಿದ ಈ ಅನುಗ್ರಹದ ಬದಲಿಗೆ ಅವನು ಏನನ್ನು ನೀಡಬೇಕು?

ಪವಿತ್ರ ಕುರ್‌ಆನ್ ತಮಗೆ ಲಭಿಸಿದ ಅನುಗ್ರಹಗಳಿಗಾಗಿ ಕೃತಜ್ಞತೆ ಪ್ರಕಟಿಸಬೇಕೆಂದು ಹಲವೆಡೆಗಳಲ್ಲಿ ಕರೆ ನೀಡಿದೆ. ಕೆಲವು ಕಾರ್ಯಗಳನ್ನು ಹೇಳಿದ ನಂತರ “ನೀವು ಕೃತಜ್ಞರಾಗಲೂಬಹುದು” ಅಥವಾ “ನೀವು ಕೃತಜ್ಞರಾಗಲಿಕ್ಕಾಗಿ” ಮುಂತಾದ ಪ್ರಯೋಗಗಳನ್ನು ನಾವು ಕುರ್‌ಆನ್‌ನಲ್ಲಿ ಕಾಣಬಹುದಾಗಿದೆ. ಒಡೆಯನು ಮಾಡಿದ ಅನುಗ್ರಹಗಳಿಗಾಗಿ ಕೃತಜ್ಞತೆ ಪ್ರಕಟಿಸಬೇಕೆಂದು ಕುರ್‌ಆನ್ ಮತ್ತು ಹದೀಸಿನಲ್ಲಿ ಕಟ್ಟುನಿಟ್ಟಿನ ಆದೇಶಗಳಿವೆ.

ಅಲ್ಲಾಹನು ನೀಡಿದ ಅನುಗ್ರಹಗಳಿಗೆ ಕೃತಜ್ಞತೆ ಪ್ರಕಟಿಸುವುದು ಎಂದರೆ ಅವನ ದಾಸನ ನಾಲಗೆಯಿಂದ ಅಲ್ಲಾಹನನ್ನು ಸ್ತುತಿಸುವುದು ಹಾಗೂ ಲಭಿಸಿದ ಅನುಗ್ರಹಗಳನ್ನು ಕೃತಜ್ಞತಾಪೂರ್ವಕವಾಗಿ ಎತ್ತಿ ಹೇಳುವುದಾಗಿದೆ. ಅವನ ಹೃದಯದಿಂದ ಕೃತಜ್ಞತಾಪೂರ್ವಕವಾಗಿ ಸಲ್ಲಿಸುವುದು ಎಂದರೆ ಅದಕ್ಕೆ ಅವನು ಸಾಕ್ಷಿಯಾಗುವುದು–ಅದನ್ನು ಅನುಭವಿಸುವದು–ಅತಿಯಾದ ಮೆಚ್ಚುಗೆಯನ್ನು ಪ್ರಕಟಿಸುವುದು ಎಂದಾಗಿದೆ. ಅವನ ಅವಯವಗಳಿಂದ ಕೃತಜ್ಞತೆ ಸಲ್ಲಿಸುವುದು ಎಂದರೆ ಅವನು (ಸತ್ಯದಲ್ಲಿ) ಅಚಲವಾಗಿ ನಿಂತುಕೊಂಡು (ಅಲ್ಲಾಹನನ್ನು) ಅನುಸರಿಸುವುದಾಗಿದೆ. (ಇಬ್ನುಲ್ ಕಯ್ಯಿಂ, ಮದಾಹಿಬು ಸಾಬಿಕ್ವೀನ್)

ಅಲ್ಲಾಹನ ಅನುಗ್ರಹ ಲಭಿಸುವಾಗ ಅವನನ್ನು ಸ್ತುತಿಸಿ ನನಗೆ ನನ್ನ ಪ್ರಭು ಇಂತಿಂತಹ ಅನುಗ್ರಹಗಳನ್ನು ನೀಡಿದ ಎಂದು ಎತ್ತಿ ಹೇಳಬೇಕು. ಅದು ಒಬ್ಬನು ನಾಲಗೆಯಿಂದ ಅರ್ಪಿಸುವ ಶುಕ್ರ್ ಆಗಿದೆ. ನಾನು ಇಂದು ಅನುಭವಿಸುತ್ತಿರುವ ಕಾರ್ಯಗಳು ನನ್ನ ಪ್ರಭು ನನಗೆ ನೀಡಿದ ಅನುಗ್ರಹವಾಗಿದೆಯೆಂದು ಸ್ಮರಿಸಿ ಅವನೊಂದಿಗೆ ಅದಮ್ಯ ಪ್ರೀತಿಯನ್ನು ತೋರಿಸುವುದು ಹೃದಯದ ಮೂಲಕ ಸಲ್ಲಿಸುವ ಕೃತಜ್ಞತೆಯಾಗಿದೆ.

ಯಾವುದೇ ಪ್ರತಿಕೂಲ ಸಂದರ್ಭಗಳಲ್ಲಿ ಅಲ್ಲಾಹನ ಆದೇಶದಿಂದ ಒಂದಿಂಚು ವಿಮುಖರಾಗದೆ ಅಚಲರಾಗಿ ನಿಲ್ಲುವುದು, ಅವನು ವಿರೋಧಿಸಿದವುಗಳನ್ನು ಮಾಡದೆ ಅವನು ಆಜ್ಞಾಪಿಸಿರುವುದನ್ನು ಎಷ್ಟು ಕಷ್ಟಗಳು ಎದುರಾದರೂ ಕಾರ್ಯರೂಪಕ್ಕಿಳಿಸಿ ಅದನ್ನು ನೆಲೆನಿಲ್ಲಿಸುವುದು, ಲಭಿಸಿದ ಅನುಗ್ರಹಗಳನ್ನು ಅಲ್ಲಾಹನಿಗೆ ಸಂಪ್ರೀತಿಯಿರುವ ಕಾರ್ಯಗಳಿಗೆ ಮಾತ್ರ ವಿನಿಯೋಗಿಸುವುದು ಮುಂತಾದವುಗಳೆಲ್ಲ ಅಲ್ಲಾಹನೊಂದಿಗಿನ ಕೃತಜ್ಞತೆಯ ಪ್ರಕಟಣೆಯಾಗಿದೆ.

ಜನರಲ್ಲಿ ಮೊತ್ತಮೊದಲು ನಮಗೆ ಅಲ್ಲಾಹನ ವತಿಯಿಂದ ಅನುಗ್ರಹಗಳು ಲಭಿಸಿದೆ ಎಂಬ ಪ್ರಜ್ಞೆ ಮೂಡಬೇಕಾಗಿದೆ. ಅದು ತನ್ನ ಪ್ರಭುವಿನಿಂದ ದೊರೆತ ಅನುಗ್ರಹವಾಗಿದೆ ಎಂಬ ಪ್ರಜ್ಞೆ ಮೂಡಿದಾಗ ತಾಳ್ಮೆ, ವಿನಯ, ಪ್ರೀತಿ, ಪರಸ್ಪರ ಸಹಕಾರ, ಗೌರವ ನೀಡುವ ಗುಣಗಳು ಉಂಟಾಗುತ್ತದೆ. ಈ ಪ್ರಜ್ಞೆ ನಷ್ಟವಾಗಿ ಎಲ್ಲವೂ ತನ್ನ ಪ್ರಯತ್ನದ ಫಲ ಎಂಬ ಮಿಥ್ಯಕಲ್ಪನೆ ಮೂಡಿದಾಗ ಮನುಷ್ಯ ಅಹಂಕಾರ, ಅತ್ಯಾಸೆ, ಪಾಪ, ಅಕ್ರಮ ಮುಂತಾದ ಕೆಟ್ಟಗುಣಗಳ ವಕ್ತಾರನಾಗಿ ಮಾರ್ಪಡುತ್ತಾನೆ.

ಪ್ರವಾದಿ(ﷺ) ಯವರ ಕಾಲದಲ್ಲಿ ಒಮ್ಮೆ ಧಾರಾಕಾರ ವರ್ಷಧಾರೆಯಾದಾಗ ಆ ಮಳೆಯ ಕುರಿತು ಜನರು ಎರಡು ವಿಧದಲ್ಲಿ ಮಾತನಾಡಿದರು. ಆಗ ಅಲ್ಲಾಹನ ಸಂದೇಶವಾಹಕರ ಪ್ರತಿಕ್ರಿಯೆ ಹೀಗಿತ್ತು. “ಜನರಲ್ಲಿ ಕೃತಜ್ಞತೆ ಪ್ರಕಟಿಸುವವರು ಹಾಗೂ ನಿಷೇಧಿಸುವವರಿದ್ದಾರೆ. (ಈಮಾನ್ ಇರುವವರು) ಇದು ಅಲ್ಲಾಹನ ಅನುಗ್ರಹವಾಗಿದೆಯೆಂದು ಹೇಳಿದರು. ಆದರೆ ಅವರಲ್ಲಿ ಕೆಲವರು ಇಂತಹ ಕಾರಣಗಳಿಂದಾಗಿ ಮಳೆ ಬಂದಿದೆ ಎಂದು ಹೇಳುತ್ತಾರೆ.” ಇದರಲ್ಲಿ ಮೊದಲನೆಯದು ಕೃತಜ್ಞತೆಯ ಅಭಿಪ್ರಾಯವಾದರೆ ಎರಡನೆಯದು ಕೃತಘ್ನತೆಯ ಅಭಿಪ್ರಾಯವಾಗಿದೆ. ಪವಿತ್ರ ಕುರ್‌ಆನ್ ಹೇಳುತ್ತದೆ.




“ನಿಮ್ಮ ಪ್ರಭುವಿನ ಅನುಗ್ರಹವನ್ನು ಪ್ರಕಟಪಡಿಸಿರಿ.” (93:11)

ಮಹಾತ್ಮರಾದ ಎಲ್ಲಾ ಪ್ರವಾದಿಗಳು ಕೃತಜ್ಞತೆ ಪ್ರಕಟಿಸುವವರಾಗಿದ್ದರೆಂದು ಕುರ್‌ಆನ್ ಹೇಳುತ್ತದೆ. ಪ್ರವಾದಿ ಇಬ್ರಾಹೀಮ್(ﷺ) ರನ್ನು ಅಲ್ಲಾಹನು ಪರಿಚಯಿಸುವಾಗ ಅವರು ತುಂಬಾ ಕೃತಜ್ಞತೆ ಪ್ರಕಟಿಸುವ ಓರ್ವ ದಾಸರಾಗಿದ್ದರು ಎಂದು ಹೇಳಿದೆ.

ಪ್ರವಾದಿಯವರು(ﷺ) ರಾತ್ರಿಯಲ್ಲಿ ಬಹಳ ದೀರ್ಘ ಸಮಯ ನಮಾಝ್ ನಿರ್ವಹಿಸುವುದರ ಕುರಿತು ಆಯಿಶಾ (﵂) ಕೇಳಿದಾಗ ಅವರು, “ನಾನು ಅಲ್ಲಾಹನ ಓರ್ವ ಕೃತಜ್ಞ ದಾಸನಾಗಬೇಡವೇ?” ಎಂದು ಪ್ರತಿಕ್ರಿಯಿಸಿದ್ದು ಗಮನಾರ್ಹವಾಗಿದೆ.

ಯೂನುಸ್ ಬಿನ್ ಉಬೈದ್(﵀) ಅವರ ಬಳಿಗೆ ಒಬ್ಬರು ಬಂದು ತಮ್ಮ ಪ್ರಾರಬ್ಧದ ಕುರಿತು ಹೇಳಿಕೊಂಡಾಗ ಅವರು ನೀಡಿದ ಉತ್ತರ ಇಲ್ಲಿ ಪ್ರಸಕ್ತವಾಗಿದೆ. “ನಿಮ್ಮ ಎರಡು ಕಣ್ಣುಗಳನ್ನು ನನಗೆ ನೀಡುವಿರಾ? ನಾನು ನಿಮಗೆ ಒಂದು ಲಕ್ಷ ದಿರ್ಹಮ್ ನೀಡುತ್ತೇನೆ. ನಿಮ್ಮ ಒಂದು ಕಾಲನ್ನು ನನಗೆ ನೀಡುವಿರಾ? ನಾನು ನಿಮಗೆ ಒಂದು ಲಕ್ಷ ದಿರ್ಹಮ್ ಕೊಡಬಲ್ಲೆ.” ಹೀಗೆ ಉಬೈದ್ ರವರು ಆ ವ್ಯಕ್ತಿಯ ಒಂದೊಂದು ಅಂಗಗಳಿಗೆ ಬೆಲೆಯನ್ನು ನಿಶ್ಚಯಿಸಿ ಅವುಗಳನ್ನು ತಮಗೆ ನೀಡುವಿರಾ ಎಂದು ಕೇಳುತ್ತಿದ್ದರು. ಆಗಂತುಕ ಹೇಳುತ್ತಾನೆ. “ನಾನು ಯಾವತ್ತೂ ಅವುಗಳನ್ನು ನಿಮಗೆ ಕೊಡಲಾರೆ.” ಆಗ ಯೂನುಸ್ ಬಿನ್ ಉಬೈದ್(﵀) ಹೇಳಿದರು. “ನಾನು ನಿಮ್ಮ ಬಳಿಯಲ್ಲಿ ಕೋಟ್ಯಂತರ ರೂಪಾಯಿಗಳನ್ನು ಕಾಣುತ್ತಿದ್ದೇನೆ. ಆದರೂ ನೀವು ಪ್ರಾರಬ್ಧದ ಕುರಿತು ದೂರುತ್ತಿದ್ದೀರಲ್ಲಾ?”

ಹೌದು, ನಮಗೆ ಸೃಷ್ಟಿಕರ್ತನು ಅದೆಷ್ಟು ಮಹತ್ವಪೂರ್ಣ ಅನುಗ್ರಹಗಳನ್ನು ದಯಪಾಲಿಸಿದ್ದಾನೆ. ನಮ್ಮ ದೇಹ. ಅದರ ಯಾವುದಾದರೊಂದು ಭಾಗಕ್ಕೆ ಹಾನಿ ಉಂಟಾದರೆ ಆಗ ಆ ಅವಯವದ ಬೆಲೆಯು ನಮಗೆ ತಿಳಿಯುತ್ತದೆ. ಸರ್ವಶಕ್ತನು ನಮಗೆ ಪ್ರತಿಯೊಂದು ಕ್ಷಣಗಳಲ್ಲಿ ನೀಡುತ್ತಿರುವ ಅನುಗ್ರಹಗಳಿಗೆ ಲೆಕ್ಕವಿಲ್ಲ. ಜನರು ತಮ್ಮ ನಡುವೆ ಮಾಡುವ ಉಪಕಾರಗಳಿಗೆ ಪರಸ್ಪರ ಕೃತಜ್ಞತೆ ಸಲ್ಲಿಸಬೇಕು. ಅದರ ನುಡಿಯ ರೂಪವನ್ನು ಪ್ರವಾದಿ(ﷺ) ಯವರು ಕಲಿಸಿಕೊಟ್ಟಿದ್ದಾನೆ. “ಅಲ್ಲಾಹನು ನಿನಗೆ ಒಳಿತು ಮಾಡಲಿ.” ಎಂದು ಪ್ರಾರ್ಥಿಸಬೇಕು.

ಉಪಕಾರ ಮಾಡಿದವರಿಗೆ ಪ್ರತ್ಯುಪಕಾರ ಮಾಡಬೇಕು. ಹಾಗೆ ಮಾಡಲು ಸಾಧ್ಯವಾಗದಿದ್ದರೆ ಕನಿಷ್ಠಪಕ್ಷ ಅವರ ಒಳಿತಿಗಾಗಿ ಅಲ್ಲಾಹನಲ್ಲಿ ಪ್ರಾರ್ಥಿಸಬೇಕೆಂದು ಪ್ರವಾದಿ(ﷺ) ಯವರು ಹೇಳಿದ್ದಾರೆ. ನಾವು ಜೀವಿಸುತ್ತಿರುವ ರಾಷ್ಟ್ರ ಹಾಗೂ ಸಮಾಜಕ್ಕೆ ಕೃತಜ್ಞತೆ ಸಲ್ಲಿಸುವುದು ನಮ್ಮ ಬಾಧ್ಯತೆಯಾಗಿದೆ ಎಂದು ಇದರಿಂದ ಸ್ಪಷ್ಟವಿದೆ. ನಮಗೆ ನಮ್ಮ ರಾಷ್ಟ್ರದಲ್ಲಿ ನಮಗಿಷ್ಟವಿರುವ ಧರ್ಮವನ್ನು ಸ್ವೀಕರಿಸಿ ಅದರ ಆಶಯ ಪ್ರಕಾರ ಜೀವಿಸುವ ಆರಾಧನಾ ಕ್ರಮಗಳನ್ನು ಮಾಡುವ ಹಾಗೂ ಅದನ್ನು ಪ್ರಚುರಪಡಿಸುವ ಸ್ವಾತಂತ್ರ್ಯ ಮತ್ತು ನಿರ್ಭಯತೆ ಇದೆ. ಅದಕ್ಕಾಗಿ ಸರ್ವಶಕ್ತನಿಗೆ ಕೃತಜ್ಞತೆ ಅರ್ಪಿಸಬೇಕು. ರಾಷ್ಟ್ರದ ಸಾರ್ವತ್ರಿಕ ಒಳಿತಿಗಾಗಿ ಕಾರ್ಯವೆಸಗುವುದು, ಧರ್ಮಕ್ಕೆ ವಿರುದ್ಧವಿಲ್ಲದ ಕಾನೂನುಗಳನ್ನು ಅನುಸರಿಸುವುದು, ರಾಷ್ಟ್ರದ ಅಭಿವೃದ್ಧಿಗಾಗಿ ಶ್ರಮಿಸುವುದು ಮುಂತಾದುವುಗಳೆಲ್ಲ ರಾಷ್ಟ್ರದೊಂದಿಗೆ ತೋರಿಸುವ ಕೃತಜ್ಞತೆಯಾಗಿದೆ. ಇಂದು ಜನರಿಗೆ ನಿರ್ಭೀತಿಯಿಂದ ಹೊರಗಿಳಿಯಲು ಕೂಡಾ ಸಾಧ್ಯವಿಲ್ಲದಂತಹ ಅದೆಷ್ಟೋ ದೇಶಗಳಿವೆ. ಅಲ್ಲಿಯ ಜನರು ಸದಾ ಗುಂಡಿನ ಮೊರೆತ ಮತ್ತು ರಕ್ತಪಾತವನ್ನೇ ನೋಡಿ ಬದುಕಬೇಕಾದ ಅನಿವಾರ್ಯ ಸಂಕಟಕ್ಕೆ ಸಿಲುಕಿದ ದುರ್ದೈವಿಗಳಾಗಿದ್ದಾರೆ. ಆದರೆ ಅಲ್ಲಾಹನ ಅಪಾರ ಅನುಗ್ರಹದಿಂದ ಅಂತಹ ಒಂದು ಪರಿಸ್ಥಿತಿ ನಿರ್ಮಾಣವಾಗಿಲ್ಲ. ಆದುದರಿಂದ ಈ ಅನುಕೂಲಕರ ಪರಿಸ್ಥಿತಿಯನ್ನು ಹದಗೆಡಿಸುವ ರೀತಿಯಲ್ಲಿರುವ ರಚನೆ, ಭಾಷಣ, ಉಗ್ರವಾದ, ವಿಧ್ವಂಸಕ ಕೃತ್ಯಗಳಲ್ಲಿ ಸತ್ಯವಿಶ್ವಾಸಿಗಳು ಏರ್ಪಡದಿರುವುದು ಅವರ ಬಾಧ್ಯತೆಯಾಗಿದೆ.

ಲಭಿಸಿದ ಅನುಗ್ರಹಗಳನ್ನು ಮರೆತ ಸಭಾ ನಿವಾಸಿಗಳನ್ನು ಕುರ್‌ಆನ್ ಪರಿಚಯಿಸುವುದನ್ನು ನೋಡಿರಿ.

﴿لَقَدۡ كَانَ لِسَبَإٖ فِي مَسۡكَنِهِمۡ ءَايَةٞۖ جَنَّتَانِ عَن يَمِينٖ وَشِمَالٖۖ كُلُواْ مِن رِّزۡقِ
رَبِّكُمۡ وَٱشۡكُرُواْ لَهُۥۚ بَلۡدَةٞ طَيِّبَةٞ وَرَبٌّ غَفُورٞ ١٥ فَأَعۡرَضُواْ فَأَرۡسَلۡنَا عَلَيۡهِمۡ

سَيْلَ الْعَرِمِ وَبَدَّلْنَاهُم بِجَنَّتَيْهِمْ جَنَّتَيْنِ ذَوَاتَيْ أُكُلٍ خَمْطٍ وَأَثْلٍ وَشَيْءٍ مِّن سِدْرٍ
قَلِيلٍ ﴿١٦﴾ ذَٰلِكَ جَزَيْنَاهُم بِمَا كَفَرُوا ۖ وَهَلْ نُجَازِي إِلَّا الْكَفُورَ ﴿١٧﴾

“’ಸಬಾ’ದವರಿಗೆ ಅವರ ಸ್ವಂತ ವಾಸಸ್ಥಾನದಲ್ಲೇ ಒಂದು ನಿದರ್ಶನವಿತ್ತು. ಬಲಭಾಗದಲ್ಲೂ ಎಡಭಾಗದಲ್ಲೂ ಎರಡು ತೋಟಗಳು. (ಅವರೊಂದಿಗೆ ಹೇಳಲಾಯಿತು) ನಿಮ್ಮ ಪ್ರಭು ಕೊಟ್ಟ ಆಹಾರವನ್ನು ಉಣ್ಣಿರಿ ಮತ್ತು ಅವನಿಗೆ ಕೃತಜ್ಞತೆ ಸಲ್ಲಿಸಿರಿ. ನಾಡು ಉತ್ತಮವೂ ಪರಿಶುದ್ಧವೂ ಆಗಿತ್ತು. ಪ್ರಭು ಕ್ಷಮಾಶೀಲನಾಗಿದ್ದನು. ಆದರೆ ಅವರು ವಿಮುಖರಾಗಿ ಹೋದರು. ಕೊನೆಗೆ ನಾವು ಅವರ ಮೇಲೆ ಅಣೆಕಟ್ಟು ಮುರಿದು ಮಹಾಪೂರವನ್ನು ಕಳುಹಿಸಿಬಿಟ್ಟೆವು. ಅವರ ಎರಡು ತೋಟಗಳ ಸ್ಥಾನದಲ್ಲಿ ತಿನ್ನಲಾಗದ ಕಹಿ ಫಲಗಳು, ರಭಾವಕ ವೃಕ್ಷಗಳು ಹಾಗೂ ಕೆಲವು ಬೋರೆ ಮರಗಳಿರುವ ಬೇರೆ ಎರಡು ತೋಟಗಳನ್ನು ಕೊಟ್ಟೆವು. ಇದು ಅವರು ಕೃತಜ್ಞತೆ ತೋರಿಸದಿದ್ದುದಕ್ಕಾಗಿ ನಾವು ನೀಡಿದ ಪ್ರತಿಫಲವಾಗಿತ್ತು. ಇಂತಹ ಪ್ರತಿಫಲವನ್ನು ಕೃತಘ್ನರ ಹೊರತು ಇನ್ನಾರಿಗೂ ನಾವು ಕೊಡುವುದಿಲ್ಲ.” (34:15-17)

ಕೃತಘ್ನತೆ ಪ್ರಕಟಿಸಿದ ಇನ್ನೊಂದು ನಾಡಿನ ನಿವಾಸಿಗಳ ಕುರಿತು ಅಲ್ಲಾಹು ಹೇಳುವುದನ್ನು ನೋಡಿರಿ.

﴿ وَضَرَبَ اللَّهُ مَثَلًا قَرْيَةً كَانَتْ آمِنَةً مُّطْمَئِنَّةً يَأْتِيهَا
رِزْقُهَا رَغَدًا مِّن كُلِّ مَكَانٍ فَكَفَرَتْ بِأَنْعُمِ اللَّهِ فَأَذَاقَهَا اللَّهُ
لِبَاسَ الْجُوعِ وَالْخَوْفِ بِمَا كَانُوا يَصْنَعُونَ ﴿١١٢﴾ ﴾

“ಅಲ್ಲಾಹನು ಒಂದು ನಾಡಿನ ಉಪಮೆ ಕೊಡುತ್ತಾನೆ. ಅದು ಶಾಂತಿಯೊಂದಿಗೆ ಸಂತೃಪ್ತ ಜೀವನ ಸಾಗಿಸುತ್ತಿತ್ತು. ಎಲ್ಲ ಕಡೆಗಳಿಂದಲೂ ಅದಕ್ಕೆ ಹೇರಳ ಜೀವನಾಧಾರ ದೊರಕುತ್ತಿತ್ತು. ಆಗಲೇ ಅದು ಅಲ್ಲಾಹನ ಕೊಡುಗೆಗಳನ್ನು ನಿಷೇಧಿಸಲಾರಂಭಿಸಿತು. ಆಗ ಅಲ್ಲಾಹನು ಅದರ ನಿವಾಸಿಗಳಿಗೆ ಅವರ ದುಷ್ಕೃತ್ಯಗಳ ಸವಿಯನ್ನು ತೋರಿಸಿದುದು ಹೇಗೆಂದರೆ ಹಸಿವೆ ಮತ್ತು ಭಯ ಅವರನ್ನು ಆವರಿಸಿದವು.” (16:112)

ಅಲ್ಲಾಹನ ಅನುಗ್ರಹಗಳಿಗೆ ಕೃತಜ್ಞತೆ ಪ್ರಕಟಿಸುವುದು ಆ ಅನುಗ್ರಹಗಳನ್ನು ನೆಲೆನಿಲ್ಲಿಸಲಿಕ್ಕಿರುವ ಮಾರ್ಗವಾಗಿದೆ. ನಮಗೆ ಲಭಿಸಿದ ಜ್ಞಾನ, ಸಂಪತ್ತು, ಆರೋಗ್ಯ, ಬಿಡುವು ಮುಂತಾದವುಗಳೆಲ್ಲ ದೊಡ್ಡ ಅನುಗ್ರಹಗಳಾಗಿವೆ. ಯಾವುದೇ ಅನುಗ್ರಹ ಚಿಕ್ಕದಿರಲಿ, ದೊಡ್ಡದಿರಲಿ ಅದನ್ನು ನನಗೆ ನನ್ನ ಸೃಷ್ಟಿಕರ್ತನು ದಯಪಾಲಿಸಿದ್ದಾನೆ ಎಂಬ ಪ್ರಜ್ಞೆಯನ್ನಿಟ್ಟುಕೊಳ್ಳುವುದು ಮುಖ್ಯವಾಗಿದೆ.

﴿ وَإِذْ تَأَذَّنَ رَبُّكُمْ لَئِن شَكَرْتُمْ لَأَزِيدَنَّكُمْ ۖ
وَلَئِن كَفَرْتُمْ إِنَّ عَذَابِي لَشَدِيدٌ ﴿٧﴾ ﴾

“ನಾವು ಕೃತಜ್ಞರಾಗಿದ್ದರೆ ನಾನು ನಿಮಗೆ ಇನ್ನೂ ಹೆಚ್ಚು ಪ್ರದಾನ ಮಾಡುವೆನೆಂದೂ ನೀವು ಕೃತಘ್ನತೆ ತೋರಿದರೆ ನನ್ನ ಶಿಕ್ಷೆಯು ಅತ್ಯಂತ ಕಠಿಣವಾಗಿದೆಯೆಂದೂ ನಿಮ್ಮ ಪ್ರಭೂ ಎಚ್ಚರಿಕೆ ಕೊಟ್ಟಿರುವುದನ್ನು ಸ್ಮರಿಸಿರಿ.” (14:7)■




### ಅಧ್ಯಾಯ 12

## ಜನಾಬತ್ತಿನ ಸ್ಥಿತಿಯ ಬೆವರು ಮತ್ತು ಮುಸಲ್ಮಾನ ಅಶುದ್ಧರಲ್ಲ

٢٠٠ - عَنْ أَبِي هُرَيْرَةَ رَضِيَ اللَّهُ عَنْهُ أَنَّ النَّبِيَّ صَلَّى اللَّهُ عَلَيْهِ وَسَلَّمَ لَقِيَهُ فِي بَعْضِ طَرِيقِ الْمَدِينَةِ وَهُوَ جُنُبٌ. فَانْخَنَسْتُ مِنْهُ فَذَهَبَ فَاغْتَسَلَ ثُمَّ جَاءَ فَقَالَ: «أَيْنَ كُنْتَ يَا أَبَا هُرَيْرَةَ؟» قَالَ: كُنْتُ جُنُبًا فَكَرِهْتُ أَنْ أُجَالِسَكَ وَأَنَا عَلَى غَيْرِ طَهَارَةٍ. فَقَالَ: «سُبْحَانَ اللَّهِ! إِنَّ الْمُسْلِمَ لَا يَنْجُسُ». [رواه البخاري ٢٨٠]

200. ಅಬೂಹುರೈರ(ﷺ) ರಿಂದ ವರದಿ. ಅಲ್ಲಾಹನ ಸಂದೇಶವಾಹಕರು(ﷺ) ಅವರಿಗೆ ಮದೀನದ ಯಾವುದೋ ರಸ್ತೆಯಲ್ಲಿ ಸಿಕ್ಕಿದರು. ಆಗ ಅಬೂಹುರೈರ(ﷺ) ಜನಾಬತ್ತಿನ ಸ್ಥಿತಿಯಲ್ಲಿದ್ದರು. ಅವರು ಹೇಳುತ್ತಾರೆ. ಆದ್ದರಿಂದ ನಾನು ಪ್ರವಾದಿ(ﷺ) ರಿಂದ ಬೇರ್ಪಟ್ಟು ಹೋಗಿ ಸ್ನಾನ ಮಾಡಿಕೊಂಡು ಬಂದೆ. ಆಗ ಪ್ರವಾದಿ(ﷺ) ಕೇಳಿದರು. "ಅಬೂಹುರೈರ ನೀವು ಎಲ್ಲಿಗೆ ಹೋಗಿದ್ದಿರಿ?" ಅಬೂಹುರೈರ(ﷺ) ಹೇಳಿದರು. "ನನಗೆ ಸ್ನಾನ ಮಾಡಬೇಕಿತ್ತು. ನಾನು ಶುದ್ಧೀಕರಿಸಿಕೊಳ್ಳದೆ ತಮ್ಮ ಸನ್ನಿಧಿಯಲ್ಲಿ ಕುಳಿತುಕೊಳ್ಳುವುದು ಸರಿಯಲ್ಲವೆಂದು ಭಾವಿಸಿದೆ." ಪ್ರವಾದಿ(ﷺ) ಹೇಳಿದರು. "ಸುಬ್‌ಹಾನಲ್ಲಾಹ್! ಸತ್ಯವಿಶ್ವಾಸಿ ಯಾವ ಸ್ಥಿತಿಯಲ್ಲೂ ಅಶುದ್ಧನಲ್ಲ."

**ಸಾರಾಂಶ :** ಈ ಹದೀಸಿನಲ್ಲಿ ಬೆವರು ಅಶುದ್ಧಿಯಲ್ಲವೆನ್ನುವುದುಕ್ಕೆ ಪರೋಕ್ಷವಾಗಿ ಆಧಾರ ಲಭಿಸುತ್ತದೆ. ದೇಹವು ಶುದ್ಧವಾಗಿದ್ದರೆ ದೇಹದಿಂದ ಪ್ರಕಟವಾಗುವುದೆಲ್ಲವೂ ಶುದ್ಧವಾಗಿರಬೇಕು. ಜನಾಬತ್ತಿನ ಅಶುದ್ಧಿಯು ಖಾತ್ರಿಯಾದ (ಹುಕ್ಮೀ) ವಿಷಯವಾಗಿದೆ ಎಂದು ತಿಳಿದಿರಲಿ. ಸತ್ಯನಿಷೇಧಿಯ ವಿಶ್ವಾಸವಿಡುವವರು ಎಂದಿನ ತನಕ ಅವರ ದೇಹದಲ್ಲಿ ಅಶುದ್ಧಿ ಇರುವುದಿಲ್ಲವೋ ಅಶುದ್ಧನೆನಿಸುವುದಿಲ್ಲ.

### ಅಧ್ಯಾಯ 13

## ಜನಾಬತ್ತಿನ ನಂತರ ಕೇವಲ ವುದೂ ಮಾಡಿ ಮಲಗುವುದು

٢٠١ - وَعَنْ عُمَرَ بْنَ الْخَطَّابِ رَضِيَ اللَّهُ عَنْهُ: سَأَلَ رَسُولَ اللَّهِ صَلَّى اللَّهُ عَلَيْهِ وَسَلَّمَ: أَيَرْقُدُ أَحَدُنَا وَهُوَ جُنُبٌ؟ قَالَ: «نَعَمْ، إِذَا تَوَضَّأَ أَحَدُكُمْ فَلْيَرْقُدْ وَهُوَ جُنُبٌ». [رواه البخاري ٢٨٧]

*24 ನೇ ಪುಟಕ್ಕೆ*

# ‘ಮೀಟೂ’ ಅಭಿಯಾನ—ಬೇಟೆಯೇ ಬೇಟೆಗಾರನನ್ನು ಬೇಟೆಯಾಡಿದಾಗ...

ಲೈಂಗಿಕತೆ ಒಂದು ದೈವಿಕ ಅನುಗ್ರಹವಾಗಿದೆ. ವ್ಯಕ್ತಿಯ ಮಾನಸಿಕ ಆರೋಗ್ಯ, ಕುಟುಂಬದ ಭದ್ರತೆ ಹಾಗೂ ಸಾಮಾಜಿಕ ಶಾಂತಿಯು ಲೈಂಗಿಕತೆಯೊಂದಿಗೆ ಜೋಡಿಸಲ್ಪಟ್ಟಿದೆ. ಸರಿಯಾದ ಮಾರ್ಗದರ್ಶನ ಪ್ರಕಾರ ಅದನ್ನು ಉಪಯೋಗಿಸದಿದ್ದರೆ ವ್ಯಕ್ತಿಯ ಮಾನಸಿಕ ಸ್ಥಿತಿಯ ಏರುಪೇರು, ಕುಟುಂಬ ಛಿದ್ರೀಕರಣ ಹಾಗೂ ಸಾಮಾಜಿಕ ವ್ಯವಸ್ಥೆಯ ವಿನಾಶಕ್ಕೆ ಕಾರಣವಾಗುತ್ತದೆ. ಜನರಲ್ಲಿ ಕಾಣಿಸಿಕೊಳ್ಳುವ ಬಹುತೇಕ ಲೈಂಗಿಕ ಕಾಯಿಲೆಗಳಿಗೆ ಅನಿಯಂತ್ರಿತ ಲೈಂಗಿಕತೆಯೇ ಕಾರಣವೆಂದು ದೃಢಪಟ್ಟಿದೆ.

ಇತ್ತೀಚೆಗೆ ಎಲ್ಲಾ ವಿಧದ ಮಾಧ್ಯಮಗಳಲ್ಲಿ ‘ಮೀಟೂ’ (Mee Too) ಎಂಬ ಹೆಸರಿನ ಅಭಿಯಾನದ ಸುದ್ದಿಗಳೇ ರಾರಾಜಿಸುತ್ತಿದೆ. ವಿವಿಧ ಕ್ಷೇತ್ರಗಳಲ್ಲಿರುವ ಉದ್ಯೋಗಿಗಳು, ಕಲಾವಿದೆಯರು ಮತ್ತು ವಿದ್ಯಾರ್ಥಿನಿಯರು ತಮ್ಮ ಮೇಲೆ ಇಂತಿಂತಹ ವ್ಯಕ್ತಿಗಳಿಂದ ಲೈಂಗಿಕ ದೌರ್ಜನ್ಯ ನಡೆದಿದೆಯೆಂದು ಬಹಿರಂಗಪಡಿಸುತ್ತಿದ್ದಾರೆ. ಈ ಪೈಕಿ ಕೇಂದ್ರ ವಿದೇಶಾಂಗ ಸಹಾಯಕ ಸಚಿವ ಎಂ. ಜೆ. ಅಕ್ಬರ್ ವಿರುದ್ಧದ ಆರೋಪವು ಅತ್ಯಧಿಕ ಮಹತ್ವವನ್ನು ಪಡಿದುಕೊಂಡಿದೆ. ಸರಕಾರವನ್ನು ಇಕ್ಕಟ್ಟಿಗೆ ಸಿಲುಕಿಸಿದ ಪ್ರಸ್ತುತ ಪ್ರಕರಣದಿಂದಾಗಿ ಎಂ.ಜೆ. ಅಕ್ಬರ್ ಕೊನೆಗೂ ರಾಜೀನಾಮೆ ನೀಡಬೇಕಾಯಿತು.

‘ಏಷ್ಯನ್ ಏಜ್’ ಪತ್ರಿಕೆಯ ಸಂಪಾದಕರಾಗಿದ್ದಾಗ ಎಂ.ಜೆ. ಅಕ್ಬರ್ ತಮಗೆ ಲೈಂಗಿಕ ಕಿರುಕುಳ ನೀಡಿದ್ದರೆಂದು ಅದೇ ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದ ಪ್ರಿಯಾ ರಮಣಿ, ಸಂಪರ್ಣ ಶರ್ಮ, ಘಝಾಲ ವಹಬ್ ಮೊದಲಾದ ಪತ್ರಕರ್ತೆಯರು ‘ಮೀಟೂ’ ಅಭಿಯಾನದ ಮೂಲಕ ಆರೋಪ ಹೊರಿಸಿದರು. ಜೊತೆಗೆ ಕೊಲಂಬಿಯನ್ ಪತ್ರಕರ್ತೆಯರೂ ಸೇರದಂತೆ ಹತ್ತಾರು ಮಂದಿ ಇದೇ ಆರೋಪದೊಂದಿಗೆ ಎಂ.ಜೆ. ಅಕ್ಬರ್ ಮೇಲೆ ಮುಗಿಬಿದ್ದರು. ತನ್ನಿಮಿತ್ತ ಎಂ.ಜೆ. ಅಕ್ಬರ್‌ಗೆ ಒತ್ತಡಕ್ಕೆ ಮಣಿದು ಅಧಿಕಾರ ತೊರೆಯುವುದಲ್ಲದೆ ಬೇರೆ ದಾರಿ ಇರಲಿಲ್ಲ.

“ನಾನೂ ಬಲಿಪಶು” (ಮೀಟೂ) ಎಂಬ ಪ್ರಯೋಗವನ್ನು ಮೊತ್ತಮೊದಲ ಬಾರಿಗೆ ಬಳಸಿದ್ದು ನ್ಯೂಯಾರ್ಕನ್ನು ಕೇಂದ್ರವಾಗಿಟ್ಟುಕೊಂಡು ಮಾನವಹಕ್ಕುಗಳಿಗಾಗಿ ಕಾರ್ಯವೆಸಗುತ್ತಿರುವ ತರಾನ ಬರ್ಕ ಎಂಬ ಆಫ್ರೋ-ಅಮೇರಿಕನ್ ಮಹಿಳೆಯಾಗಿದ್ದಾರೆ. ಅವರು “ನನ್ನ ಸ್ಥಳ” (ಮೈ ಸ್ಪೇಸ್) ಎಂಬ ಹೆಸರಿನ ಒಂದು ಸಾಮಾಜಿಕ ಜಾಲತಾಣದಲ್ಲಿ ತಮ್ಮ ಸ್ವಂತ ಅನುಭವವನ್ನು ಬಹಿರಂಗಪಡಿಸಿದ ಸಂದರ್ಭದಲ್ಲಿ ಈ ಪದ ಬಳಕೆಗೆ ಬಂತು. ಇದು 2006ರಲ್ಲಿ ನಡೆಯುತ್ತದೆ. ಮಹಿಳೆಯರು ಹಲವು ಪ್ರಾಯದಲ್ಲಿ ಹಲವು ರೀತಿಯಲ್ಲಿ ಎದುರಿಸಿದ ಲೈಂಗಿಕ ಕಿರುಕುಳಗಳ ಕುರಿತು ಸಮಾಜದಲ್ಲಿ ಜಾಗೃತಿ ಮೂಡಿಸಿ ಬಲಿಪಶುವಾದವರಲ್ಲಿ ಧೈರ್ಯ ತುಂಬುವ ಉದ್ದೇಶದಿಂದ ಈ ಅಭಿಯಾನವನ್ನು ಆರಂಭಿಸಲಾಗಿತ್ತು.

2017ನೇ ಅಕ್ಟೋಬರ್ 15ರಂದು ಅಲೀಸ ಮಿಲಾನೋ ಎಂಬ ಅಮೇರಿಕನ್ ನಟಿ ತಾವು ಅನುಭವಿಸಿದ ಲೈಂಗಿಕ ದೌರ್ಜನ್ಯವನ್ನು ಸಾಮಾಜಿಕ ಜಾಲತಾಣಗಳ ಮೂಲಕ ಬಯಲುಗೊಳಿಸುತ್ತಾರೆ. ಅವರು ಹಾಲಿವುಡ್‌ನ ಪ್ರಮುಖರ ಲೈಂಗಿಕ ಶೋಷಣೆಯನ್ನು

ಹೊರತರಲು 'ಮೀಟೂ' ಎಂಬ ಹ್ಯಾಶ್ ಟ್ಯಾಗನ್ನು ಉಪಯೋಗಿಸಿ ಸಾಮಾಜಿಕ ಮಾಧ್ಯಮಗಳಲ್ಲಿ ಪೋಸ್ಟ್ ಮಾಡಲು ಕರೆ ನೀಡಿದರು. 24 ಗಂಟೆಯೊಳಗೆ 120 ಲಕ್ಷ ಪೋಸ್ಟ್‌ಗಳು ಫೇಸ್ ಬುಕ್‌ನಲ್ಲಿ ಕಾಣಿಸಿಕೊಂಡವು ಎಂಬ ಲೆಕ್ಕಾಚಾರವಿದೆ. ಅನಂತರ ಸ್ತ್ರೀಯರು ಶೋಷಣೆಗೊಳಪಡುವ ಹಲವೆಡೆಗಳಲ್ಲಿ ಆ ಹ್ಯಾಶ್ ಟ್ಯಾಗನ್ನು ಉಪಯೋಗಿಸಲ್ಪಟ್ಟಿತು.

ಇಂದು ಭಾರತದಲ್ಲಿ 'ಮೀಟೂ' ಹೊತ್ತಿ ಉರಿಯುತ್ತಿದೆ. ಅಕ್ಟೋಬರ್ 4ರಂದು ಈ ಪ್ರತಿಭಟನೆ ಆರಂಭವಾಗುತ್ತದೆ. ಮೂಲತಃ ಒಟ್ಟಪಾಲದವಳಾದ ಬೆಂಗಳೂರು ನಿವಾಸಿ ಪತ್ರಕರ್ತೆ ಸಂಧ್ಯಾ ಮೆನನ್ ತಮ್ಮ ಮಾಜಿ ಮೇಲಾಧಿಕಾರಿ ಈಗ ಹೈದರಾಬಾದಿನಲ್ಲಿ ಒಂದು ಪತ್ರಿಕೆಯ ಪ್ರಾದೇಶಿಕ ಸಂಪಾದಕರಾದ ಕೆ.ಆರ್. ಶ್ರೀನಿವಾಸನ್ ಅವರ ವಿರುದ್ಧ ಲೈಂಗಿಕ ದೌರ್ಜನ್ಯದ ಆರೋಪ ಹೊರಿಸಿದರು. ಇದರೊಂದಿಗೆ ಅಂತಹ ಕಥೆಗಳನ್ನು ಹೇಳುವ ಟ್ವಿಟರ್‌ಗಳ ಪ್ರವಾಹ ಆರಂಭವಾಯಿತು. ಹಿಂದಿ ನಟಿಯೊಬ್ಬಳು ಪ್ರಸಿದ್ಧ ನಟನ ಹೆಸರು ಬಹಿರಂಗಪಡಿಸಿದ ಘಟನೆಯು ಇದಕ್ಕಿಂತ ಮುಂಚೆಯೇ ಸಾಮಾಜಿಕ ಜಾಲತಾಣಗಳಲ್ಲಿ ಕಾವೇರಿತ್ತು.

2017 ನವೆಂಬರ್‌ನಲ್ಲಿ ಭಾರತದಲ್ಲಿ ಮೊದಲ 'ಮೀಟೂ' ಘಟನೆ ನಡೆಯುತ್ತದೆ. ಅಮೇರಿಕದಲ್ಲಿ ಕಾನೂನು ವಿದ್ಯಾರ್ಥಿನಿಯಾದ ರಾಯ್ ಸರ್ಕಾರ್ ಭಾರತದ ವಿಶ್ವವಿದ್ಯಾಲಯವು ಹಾಗೂ ಇನ್ನಿತರ ಪ್ರತಿಷ್ಠಿತ ಶೈಕ್ಷಣಿಕ ಸಂಸ್ಥೆಗಳಲ್ಲಿ ಕಾರ್ಯವೆಸಗುತ್ತಿರುವ ಸುಮಾರು 60 ಮಂದಿಯ ಹೆಸರು ಮತ್ತು ಅವರು ನಡೆಸಿದ ಲೈಂಗಿಕ ಕಿರುಕುಳಗಳ ಪಟ್ಟಿಯನ್ನು ಬಹಿರಂಗಪಡಿಸಿದರು.

ಸ್ತ್ರೀವಾದಿಗಳಲ್ಲಿಯೇ ಹಲವರು ಇದರ ವಿರುದ್ಧ ಧ್ವನಿಯೆಬ್ಬಿಸಿದರು. ಕಫಿಲ ಎಂಬ ವೆಬ್‌ಸೈಟಿನಲ್ಲಿ ರಾಯ್ ಸರ್ಕಾರರ ಪಟ್ಟಿಯನ್ನು ಪ್ರಶ್ನಿಸಿ ಪ್ರಸಾರಗೊಳಿಸಿದ ಅರ್ಜಿಯಲ್ಲಿ ಸಹಿ ಹಾಕಿದವರಲ್ಲಿ ಹಲವರು ಭಾರತದ ಮಹಿಳಾವಾದಿ ಚಳುವಳಿಯಲ್ಲಿ ಆರಂಭದಿಂದಲೂ ತೊಡಗಿಕೊಂಡಿದ್ದ ಹಿರಿಯರಾಗಿದ್ದರು. ಅವರ ಪ್ರಮುಖ ಆರೋಪ ಈ ಪಟ್ಟಿಯನ್ನು ಕಾನೂನು ವಿಧಿಸುವ ಕ್ರಮಕ್ಕನುಸಾರ ಸಿದ್ಧಪಡಿಸಿದ್ದಲ್ಲ ಎಂದಾಗಿತ್ತು. ಆದರೆ ಯುವತಿಯರಾದ ಸ್ತ್ರೀವಾದಿಗಳು ಈ ವಾದವನ್ನು ವಿರೋಧಿಸಿ ರಂಗಪ್ರವೇಶಿಸಿದರು.

ಈಗ 'ಮೀಟೂ' ಮೂಲಕ ತಮ್ಮ ಮೇಲಾಗಿದೆ ಎಂದು ಹೇಳಲಾಗುವ ಲೈಂಗಿಕ ದೌರ್ಜನ್ಯವನ್ನು ಬಹಿರಂಗಪಡಿಸುತ್ತಿರುವ ಮಹಿಳೆಯರ ಕ್ರಮದ ವಿರುದ್ಧವೂ ಅಲ್ಲಲ್ಲಿ ಟೀಕೆಗಳು ವ್ಯಕ್ತವಾಗತೊಡಗಿದೆ. ಒಬ್ಬ ಪುರುಷನನ್ನು ಒಂದು ಸುಪ್ರಭಾತದಲ್ಲಿ ಯಾವುದೇ ಕಾನೂನು ಕ್ರಮ ಸ್ವೀಕರಿಸದೆ ಇದ್ದಕ್ಕಿದ್ದಂತೆ ಟ್ವಿಟ್ಟರ್ ಅಥವಾ ವೆಬ್‌ಸೈಟ್ ಮೂಲಕ ಖಳನಾಯಕನಾಗಿ ಬಿಂಬಿಸುವುದು ಎಷ್ಟರಮಟ್ಟಿಗೆ ಸರಿ ಎಂದು ಹಲವರು ಪ್ರಶ್ನಿಸಲಾರಂಭಿಸಿದ್ದಾರೆ.

ಈ ಬಯಲುಗೊಳಿಸುವಿಕೆಯು ಸರಿ–ತಪ್ಪುಗಳ ಕುರಿತು ಚರ್ಚೆಗಳು ಕಾವೇರಿದೆ. ಇದನ್ನು ಹಲವರು ಹಲವು ದೃಷ್ಟಿಯಲ್ಲಿ ನೋಡುತ್ತಿದ್ದಾರೆ. ಚಿಕ್ಕ ಪ್ರಾಯದಲ್ಲಿ ಅನುಭವಿಸಿದ ಹಿಂಸೆಯ ಮಾನಸಿಕ ಆಘಾತದಿಂದ ಅದು ಬಲಿಪಶುವಿಗೆ ವಿಮೋಚನೆಯನ್ನು ನೀಡುತ್ತದೆ. ಹಿರಿತನ, ಪದವಿ, ಹಣ, ಪ್ರಾಯ, ಅಧಿಕಾರದ ಬಲವಿರುವ ಒಬ್ಬ ಪುರುಷನಿಂದ ಇಂತಹ ಅನ್ಯಾಯಗಳಿಗೆ ಗುರಿಯಾದ ಹೆಣ್ಣಿಗೆ ಯಾವುದಾದರೊಂದು ಘಟ್ಟದಲ್ಲಿ ಬೇಟೆಗಾರನನ್ನು ಶಿಕ್ಷಿಸಲು 'ಮೀಟೂ' ಸಹಾಯಕವಾಗಿದೆ. ಪೊಲೀಸ್, ತನಿಖೆ, ಕೋರ್ಟ್ ಮುಂತಾದ ತಾಪತ್ರಯಗಳಿಲ್ಲದೆ ಪರಿಸರದಲ್ಲಿರುವವರ ಪ್ರಜಾಸತ್ತಾತ್ಮಕ ಪ್ರಜ್ಞೆಯು ಉಂಟುಮಾಡುವ ಸಾಮಾಜಿಕ ಒತ್ತಡದ ಮೂಲಕ ಆರೋಪಿಯನ್ನು ಅವಮಾನಕ್ಕೆ ಗುರಿಪಡಿಸುವುದೇ ಆ ಶಿಕ್ಷೆಯಾಗಿದೆ. ಅನಂತರ ಅವನು ಇತರರ ಅಸಹಕಾರ, ನಿಂದನೆ ಅಥವಾ ತನ್ನ ಮನಃಸಾಕ್ಷಿಯ ಕಡೆಗೆ ಓಗೊಟ್ಟು ಸಾರ್ವಜನಿಕ ಜೀವನದಿಂದ ಹಿಂದೆ ಸರಿಯುವ ಸಾಧ್ಯತೆ ಇದೆ. ಪೀಡನೆಗೆ ಗುರಿಯಾದ ಮಹಿಳೆ ಮರ್ಯಾದೆಗೆ ಹೆದರಿ ಏನನ್ನೂ ಹೇಳುವುದಿಲ್ಲ ಎಂಬ ಪುರುಷನ ರಕ್ಷಾಕವಚವನ್ನು 'ಮೀಟೂ' ಕಿತ್ತುಕೊಂಡಿದೆ. ಇಂತಹ ಕಿರುಕುಳಗಳು ಯಾವುದಾದರೊಂದು ದಿನ ತನಗೆ ಉರುಳಾಗಿ ಪರಿಣಮಿಸಬಹುದು ಎಂಬ ಎಚ್ಚರಿಕೆ 'ಮೀಟೂ' ಪುರುಷನಿಗೆ ನೀಡಿದೆ ಎನ್ನುವುದು ಕೆಲವರ ವಾದವಾಗಿದೆ.

ತಿಂಗಳುಗಳು ಅಥವಾ ವರ್ಷಗಳ ಮುಂಚೆ ನಡೆದ ಘಟನೆ ಎಂದು ಹೇಳಲಾಗುವ ಲೈಂಗಿಕ ಹಿಂಸೆಯ ಆರೋಪ ಸತ್ಯವಾಗಿದೆಯೇ? ಇದರಲ್ಲಿ ವ್ಯಕ್ತಿಯ ತೇಜೋವಧೆ ಇಲ್ಲವೇ? ಅಪಪ್ರಚಾರವಾಗಿರುವ ಸಾಧ್ಯತೆ ಇಲ್ಲವೇ? ಸಾಕ್ಷಿ ಅಥವಾ ಪುರಾವೆಗಳಿಲ್ಲದಿರುವುದರಿಂದ ಅದನ್ನು ನಂಬುವುದು ಹೇಗೆ? ಈ ಪ್ರಶ್ನೆಗಳನ್ನು ಕಡೆಗಣಿಸುವಂತಿಲ್ಲ. ಉತ್ತಮ ಕುಟುಂಬ ಜೀವನ ನಡೆಸುತ್ತಿರುವ ಮಹಿಳೆಯೋರ್ವಳು ತಾನು ಸ್ವಯಂ ಅವಮಾನಕ್ಕೀಡಾಗುವ ನೆಲೆಯಲ್ಲಿ ಈ ಮೊದಲು ಅದ್ಯಾವತ್ತೋ ನಡೆದ ಲೈಂಗಿಕ ಕಿರುಕುಳವನ್ನು ಬಹಿರಂಗಪಡಿಸಲು ಮುಂದಾಗುವಳೇ ಎಂಬ ಪ್ರಶ್ನೆಯೂ ಪ್ರಸಕ್ತವಾಗಿದೆ. ಕುಟುಂಬ ಮತ್ತು ಸಮಾಜದಲ್ಲಿ ತನಗಿರುವ ಉತ್ತಮ ಹೆಸರನ್ನು ಕಳೆದುಕೊಂಡು ತಪ್ಪಿತಸ್ಥಳಾಗಿ ಮುದ್ರೆಯೊತ್ತಲ್ಪಡುತ್ತೇನೆ ಎಂಬ ಭಯವಿರುವ ಹೆಣ್ಣು ಇಂತಹ ಘಟನೆಯನ್ನು ಬಯಲು ಮಾಡಲು ಧೈರ್ಯದಿಂದ ಮುಂದಾಗುವ ಸಾಧ್ಯತೆ ತೀರಾ ವಿರಳ.

ಕಟ್ಟುಕಥೆಗಳನ್ನು ಹೊಸೆದು ಸ್ವಯಂ ಅವಮಾನಿತರಾಗಲು ಯಾವ ಮಹಿಳೆಯೂ ಸಿದ್ಧಳಿರುವುದಿಲ್ಲ. ಆದರೆ ಹಲವು ಮಹಿಳೆಯರು ಅವನು ನನ್ನೊಂದಿಗೆ ಅಶ್ಲೀಲವಾಗಿ ಮಾತನಾಡಿದ, ನನ್ನ ಕೈ ಹಿಡಿದು ಎಳೆದ, ಜೊತೆಯಲ್ಲಿ ಬರುತ್ತೀಯಾ ಎಂದು ಕೇಳಿದ... ಎಂಬ ಆರೋಪಗಳನ್ನಷ್ಟೇ ಮಾಡಿದ್ದಾರೆ. ಅದರಲ್ಲಿ ಅವರಿಗೆ ಅಂತಹ ಮಾನಹಾನಿಯೇನೂ ಸಂಭವಿಸುವುದಿಲ್ಲ. ಆದರೆ ಆರೋಪಕ್ಕೆ ಗುರಿಯಾದವರು ಉನ್ನತ ಸ್ಥಾನಗಳಲ್ಲಿ ವಿರಾಜಿ-ತರಾಗಿದ್ದರೆ ಆ ಆರೋಪಗಳು ಅವರನ್ನು ಬೇಟೆಯಾಡುತ್ತದೆ. ಸಾಮಾಜಿಕ ಮಾಧ್ಯಮಗಳು ಅವರ ತೇಜೋವಧೆ ಮಾಡುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

ದೌರ್ಜನ್ಯ ನಡೆದಾಗ ಪ್ರತಿಭಟಿಸದೆ ಈಗೇಕೆ ಪ್ರತಿಭಟಿಸಲಾಗು-ತ್ತದೆ? ಅಂದು ಅದನ್ನು ವಿರೋಧಿಸುವ ಧೈರ್ಯ ನಮಗಿರಲಿಲ್ಲ. ವಿರೋಧಿಸುತ್ತಿದ್ದರೆ ಉದ್ಯೋಗ ಮತ್ತು ಶಿಕ್ಷಣದ ಮುಂದುವರಿಕೆಗೆ ಸಂಚಕಾರ ಬರುತ್ತಿತ್ತು... ಹೀಗೆ ಹಲವು ಉತ್ತರಗಳೂ ಲಭಿಸುತ್ತದೆ. ಇತರ ಯಾವುದೇ ನಷ್ಟ ಸಂಭವಿಸಿದರೂ ಮಾನಹಾನಿ ಮಾಡಿದ ವ್ಯಕ್ತಿಯನ್ನು ಕಾನೂನಿನ ಕೈಗೊಪ್ಪಿಸುವ ಧೈರ್ಯವನ್ನು ತಕ್ಷಣ ತೋರಿಸುವುದು ಹಲವು ವರ್ಷಗಳ ನಂತರ ತೋರಿಸುವುದಕ್ಕಿಂತ ಹೆಚ್ಚು ಅಪೇಕ್ಷಣೀಯವಲ್ಲವೇ?

ಸ್ತ್ರೀಯರು ಅಥವಾ ಹೆಣ್ಣುಮಕ್ಕಳು ಮನೆಯಲ್ಲಿ ಹಾಗೂ ಮನೆಯ ಹೊರಗೆ ಒಂದೇ ರೀತಿಯಲ್ಲಿ ಸುರಕ್ಷಿತರಲ್ಲ ಎಂದು ಸ್ಪಷ್ಟಪಡಿಸುವ ಸುದ್ದಿಗಳನ್ನು ನಾವು ದಿನನಿತ್ಯ ಕೇಳುತ್ತಿದ್ದೇವೆ. ತಂದೆ, ಅಣ್ಣ, ತಮ್ಮ, ಗುರು, ನಿಕಟವರ್ತಿಗಳು ಮೊದಲ್ಗೊಂಡು ಪ್ರೀತ್ಯಾದರಗಳಲ್ಲಿ ಜೋಡಿಸಲ್ಪಟ್ಟ ಸಂಬಂಧಗಳಲ್ಲಿ ಕೂಡಾ ಎದೆ ನಡುಗಿಸುವಂತಹ ವರ್ತನೆ ಉಂಟಾಗುತ್ತದೆ. ಆದರೆ ಅವುಗಳಲ್ಲಿ ಕೆಲವು ಮಾತ್ರ ಹೊರ ಜಗತ್ತಿಗೆ ತಿಳಿಯುತ್ತದೆ.

ಲೈಂಗಿಕ ರಂಗದಲ್ಲಿರುವ ಅರಾಜಕತೆಯು ಸಮಾಜ ಮತ್ತು ವ್ಯಕ್ತಿಗಳ ಮೇಲೆ ಹಲವು ವಿಧದಲ್ಲಿ ನಕರಾತ್ಮಕ ಪರಿಣಾಮವನ್ನು ಬೀರಿದೆ. ಇಂಟರ್ನೆಟ್ಟಿನ ಅನಂತ ಸಾಧ್ಯತೆಗಳು, ಸಿನಿಮಾಗಳು, ಧಾರಾವಾಹಿಗಳು ವರ್ತಮಾನದಲ್ಲಿ ಪ್ರಾಯ ಮತ್ತು ಲಿಂಗ ವ್ಯತ್ಯಾ-ಸವಿಲ್ಲದೆ ಲೈಂಗಿಕ ಚಿಂತನೆಗಳನ್ನು ವರ್ಧಿಸುತ್ತದೆ. ಈ ಸನ್ನಿವೇಶದಲ್ಲಿ ಕಣ್ಣುಗಳು ಮತ್ತು ಗುಪ್ತಾಂಗಗಳನ್ನು ರಕ್ಷಿಸಿಕೊಂಡು ಪಾವನವಾಗಿ ಜೀವಿಸುವುದು ಸ್ವಲ್ಪ ಶ್ರಮದ ಕಾರ್ಯವೇ ಸರಿ.

ಲೈಂಗಿಕತೆ ಒಂದು ದೈವಿಕ ಅನುಗ್ರಹವಾಗಿದೆ. ವ್ಯಕ್ತಿಯ ಮಾನಸಿಕ ಆರೋಗ್ಯ, ಕುಟುಂಬದ ಭದ್ರತೆ ಹಾಗೂ ಸಾಮಾಜಿಕ ಶಾಂತಿಯು ಲೈಂಗಿಕತೆಯೊಂದಿಗೆ ಜೋಡಿಸಲ್ಪಟ್ಟಿದೆ. ಸರಿಯಾದ ಮಾರ್ಗದ-ರ್ಶನ ಪ್ರಕಾರ ಅದನ್ನು ಉಪಯೋಗಿಸದಿದ್ದರೆ ವ್ಯಕ್ತಿಯ ಮಾನಸಿಕ ಸ್ಥಿತಿಯ ಏರುಪೇರು, ಕುಟುಂಬ ಛಿದ್ರೀಕರಣ ಹಾಗೂ ಸಾಮಾಜಿಕ ವ್ಯವಸ್ಥೆಯ ವಿನಾಶಕ್ಕೆ ಕಾರಣವಾಗುತ್ತದೆ. ಜನರಲ್ಲಿ ಕಾಣಿಸಿಕೊಳ್ಳುವ ಬಹುತೇಕ ಲೈಂಗಿಕ ಕಾಯಿಲೆಗಳಿಗೆ ಅನಿಯಂತ್ರಿತ ಲೈಂಗಿಕತೆಯೇ ಕಾರಣವೆಂದು ದೃಢಪಟ್ಟಿದೆ.

ಒಬ್ಬನು ತನ್ನ ಲೈಂಗಿಕತೆಯನ್ನು ಸಮ್ಮತಾರ್ಹ ವಿವಾಹದ ಮೂಲಕ ಈಡೇರಿಸಿಕೊಳ್ಳಬೇಕೆನ್ನುವುದು ಇಸ್ಲಾಮಿನ ಬೇಡಿಕೆಯಾಗಿದೆ. ಇದಕ್ಕೆ ಹೊರತಾದ ಸಂಭವಗಳೆಲ್ಲವೂ ನಾಶಕ್ಕೆ ಹೇತುವಾಗಿದೆ.

ಪರಪುರುಷ ಸಂಬಂಧ ಹಾಗೂ ಪರಸ್ತ್ರೀ ಸಂಬಂಧವು ಕೌಟುಂಬಿಕ ಸಂಬಂಧವನ್ನು ಛಿದ್ರಗೊಳಿಸುವ ಮತ್ತು ಬರ್ಬರ ಹತ್ಯೆಯೆಡೆಗೆ ಕೊಂಡೊಯ್ಯುವ ದೃಶ್ಯಗಳು ವ್ಯಾಪಕವಾಗಿದೆ. ಸಲಿಂಗರತಿ ಮತ್ತು ಒಪ್ಪಿಗೆಯ ಪರಪುರುಷ ಸ್ತ್ರೀಯ ಲೈಂಗಿಕತೆಗೆ ಕಾನೂನಿನ ಮಾನ್ಯತೆ ದೊರೆತಿರುವುದರಿಂದ ಪ್ರಕಟವಾಗುತ್ತಿರುವ ಸಂತೋ-ಷಾಧಿಕ್ಯವು ಮುಂಬರಲಿರುವ ವಿನಾಶದೆಡೆಗೆ ಬೆಟ್ಟು ಮಾಡುತ್ತಿದೆ ಎಂಬುದರಲ್ಲಿ ಸಂಶಯವಿಲ್ಲ.

ಇಸ್ಲಾಮ್ ಪ್ರಸ್ತುತಪಡಿಸುವ ಸಮಾಜವು ಇಂತಹ ನೀಚತೆಗಳಿಂದ ಸಂಪೂರ್ಣ ಮುಕ್ತವಾಗಿದೆ. ಶಾಂತವಾದ ಕುಟುಂಬದ ವಾತಾವರಣ ಹಾಗೂ ಸಮಾಧಾನದ ದಾಂಪತ್ಯಕ್ಕಾಗಿ ವಿವಾಹೇತರ ಸಂಬಂಧ-ಗಳನ್ನು ತೊರೆಯುವುದು ಅನಿವಾರ್ಯವಾಗಿದೆ. ಒಬ್ಬ ವ್ಯಕ್ತಿ ತನ್ನ ಲೈಂಗಿಕತೆಯನ್ನು ಅತ್ಯುತ್ತಮವಾದ ನೆಲೆಯಲ್ಲಿ ಉಪಯೋಗಿಸಲು ಹಾಗೂ ಕೆಟ್ಟ ಮಾರ್ಗದಿಂದ ತಡೆದಿರಿಸಲು ಅಗತ್ಯವಾದ ಎಲ್ಲಾ ನಿರ್ದೇಶನಗಳನ್ನು ಇಸ್ಲಾಮ್ ಕಲಿಸಿದೆ.

﴿ وَلَا تَقْرَبُوا۟ ٱلزِّنَىٰٓ ۖ إِنَّهُۥ كَانَ فَـٰحِشَةً
وَسَآءَ سَبِيلًا ﴿٣٢﴾ ﴾

"ನೀವು ವ್ಯಭಿಚಾರದ ಹತ್ತಿರವೂ ಸುಳಿಯಬೇಡಿರಿ. ಅದು ಅತಿಹೀನ ಕಾರ್ಯ ಮತ್ತು ಅತ್ಯಂತ ಕೆಟ್ಟ ಮಾರ್ಗವಾಗಿದೆ." (17:32) ವ್ಯಭಿಚಾ-ರದತ್ತ ಸುಳಿಯಲೂ ಬೇಡಿರಿ ಎಂಬುದು ಇಸ್ಲಾಮಿನ ಆದೇಶವಾಗಿದೆ. ಅದರೆಡೆಗೆ ಕೊಂಡೊಯ್ಯುವ ಯಾವ ಕಾರ್ಯಗಳಿವೆಯೋ ಅವೆಲ್ಲವನ್ನೂ ತೊರೆಯಬೇಕೆನ್ನುವುದು ಇಸ್ಲಾಮ್ ಲೋಕಕ್ಕೆ ನೀಡಿದ ಆಜ್ಞೆಯಾಗಿದೆ.

*44 ನೇ ಪುಟಕ್ಕೆ*

# ತಕ್ವಾ—ಸಕಲ ಒಳಿತುಗಳ ಮೂಲಕಾರಣ

ಮುಸಲ್ಮಾನರಿಗೆ ಇಹಲೋಕ ಮತ್ತು ಪರಲೋಕದಲ್ಲಿ ಸಹಾಯ, ಗೌರವ, ಮೋಕ್ಷ ಬೇಕು ಎಂದಾದರೆ, ಅವರ ಸಂಕಟಗಳು ನಿವಾರಣೆಯಾಗಬೇಕಾದರೆ, ಅವರ ಕಾರ್ಯಕಲಾಪಗಳು ಸುಲಲಿತವಾಗಿ ಸಾಗಬೇಕಾದರೆ, ಅವರ ಪಾಪಗಳು ಕ್ಷಮಿಸಲ್ಪಡಬೇಕಾದರೆ, ಅವರ ದೋಷಗಳು ಅಳಿಯಬೇಕಾದರೆ, ಅವರಿಗೆ ಸ್ವರ್ಗಪ್ರಾಪ್ತಿಯಾಗಬೇಕಾದರೆ ಅವರು ಅಲ್ಲಾಹನನ್ನು ಭಯಪಟ್ಟು ತಕ್ವಾದೊಂದಿಗೆ ಜೀವಿಸಬೇಕು.

✍ ಶೈಖ್ ಇಬ್ನ್ ಬಾಝ್

ಅಲ್ಲಾಹನ ಗ್ರಂಥದಲ್ಲಿ ಮತ್ತು ಮುಹಮ್ಮದ್(ﷺ) ರವರ ಸುನ್ನತ್ತಿನಲ್ಲಿ ತಕ್ವಾದ ಬಗ್ಗೆಯಿರುವ ಪ್ರಸ್ತಾವನೆಗಳನ್ನು ಗಮನಿಸಿದರೆ ಅದು ಇಹಲೋಕ ಮತ್ತು ಪರಲೋಕದ ಸಕಲ ಒಳಿತುಗಳ ಮೂಲಕಾರಣವೆಂದು ತಿಳಿದುಕೊಳ್ಳಬಹುದು.

ಓ ಅಲ್ಲಾಹನ ದಾಸನೇ! ನೀನು ಅಲ್ಲಾಹನ ಗ್ರಂಥವನ್ನು ಆದಿಯಿಂದ ಅಂತ್ಯದ ತನಕ ಓದಿದರೆ ಸಕಲ ಒಳಿತುಗಳ ಶೀರ್ಷಿಕೆ, ಸಕಲ ಒಳಿತುಗಳ ಕೀಲಿಕೈ ಮತ್ತು ಇಹಲೋಕ ಹಾಗೂ ಪರಲೋಕದ ಸರ್ವ ಒಳಿತುಗಳ ಮೂಲಕಾರಣ 'ತಕ್ವಾ' ಆಗಿದೆಯೆಂದು ನೀನು ಕಾಣುವೆ. ದುರಂತಗಳು, ಸಂಕಷ್ಟಗಳು, ಪರೀಕ್ಷೆಗಳು, ಶಿಕ್ಷೆಗಳು ಬರುವುದು ತಕ್ವಾದ ವಿಷಯದಲ್ಲಿ ತೋರಿಸುವ ಅಸಡ್ಡೆ ಮತ್ತು ತಿರಸ್ಕಾರದಿಂದ ಹಾಗೂ ಅದನ್ನು ಹಾಳು ಮಾಡುವುದರಿಂದ, ಅಥವಾ ಅದರ ಒಂದು ಭಾಗವನ್ನು ಹಾಳು ಮಾಡುವುದರಿಂದಾಗಿದೆ.

ತಕ್ವಾ ಸೌಭಾಗ್ಯ ಮತ್ತು ಮೋಕ್ಷದ, ಸಂಕಟ ನಿವಾರಣೆಯ, ಇಹಲೋಕ ಮತ್ತು ಪರಲೋಕದಲ್ಲಿ ಗೌರವ ಮತ್ತು ಸಹಾಯ ಸಿಗುವ ಮೂಲ ಕಾರಣವಾಗಿದೆ. ನಾವು ಹೇಳಿದ ಈ ವಿಷಯಗಳ ಬಗ್ಗೆ ಬೆಳಕು ಚೆಲ್ಲುವ ಕೆಲವು ಆಯತ್‌ಗಳನ್ನು ನೋಡೋಣ.

﴿ وَمَن يَتَّقِ ٱللَّهَ يَجۡعَل لَّهُۥ مَخۡرَجٗا ۝٢ وَيَرۡزُقۡهُ مِنۡ حَيۡثُ لَا يَحۡتَسِبُۚ ﴾

"ಯಾರು ಅಲ್ಲಾಹನನ್ನು ಭಯಪಟ್ಟು ಜೀವಿಸುತ್ತಾನೋ ಅವನಿಗೆ ಅಲ್ಲಾಹು ಒಂದು ನಿರ್ಗಮನ ದ್ವಾರವನ್ನು ಮಾಡಿಕೊಡುವನು ಮತ್ತು ಅವನು ಭಾವಿಸದ ಕಡೆಯಿಂದ ಅವನಿಗೆ ಜೀವನಾಧಾರವನ್ನು ದಯಪಾಲಿಸುವನು." (ಸೂರ ಅತ್ತಲಾಕ್ 2–3)

ಕೆಲವು ಸಲಫ್‌ಗಳು ಹೇಳುತ್ತಾರೆ: "ಇದು ಅಲ್ಲಾಹನ ಗ್ರಂಥದಲ್ಲಿರುವ ಒಂದು ಸಮಗ್ರ (ಎಲ್ಲವನ್ನು ಒಳಗೊಳ್ಳುವ) ಆಯತ್ ಆಗಿದೆ." ಅಥವಾ ಅವರು ಹೇಳುತ್ತಾರೆ: "ಇದು ಅಲ್ಲಾಹನ ಗ್ರಂಥದಲ್ಲಿರುವ ಸಮಗ್ರ ಆಯತ್‌ಗಳಲ್ಲೊಂದು."

ಏಕೆಂದರೆ ಅಲ್ಲಾಹು ಇಹಲೋಕ ಮತ್ತು ಪರಲೋಕದ ಒಳಿತನ್ನು ಇದರ ಮೇಲೆ (ತಕ್ವಾದ ಮೇಲೆ) ಇಟ್ಟಿದ್ದಾನೆ. ಯಾರು ಅಲ್ಲಾಹನನ್ನು ಭಯಪಟ್ಟು ಅವನು ಹೇಳಿದಂತೆ ಕೇಳುತ್ತಾ ಜೀವಿಸುತ್ತಾರೋ ಅವರಿಗೆ ಇಹಲೋಕ ಮತ್ತು ಪರಲೋಕದ ಸಂಕಷ್ಟಗಳಿಂದ ಪಾರಾಗುವ ಒಂದು ನಿರ್ಗಮನ ದ್ವಾರವನ್ನು ಅಲ್ಲಾಹು ಖಂಡಿತ ಮಾಡಿಕೊಡುತ್ತಾನೆ. ತನ್ನನ್ನು ಇಹಲೋಕ ಮತ್ತು ಪರಲೋಕದ ಸಂಕಷ್ಟಗಳಿಂದ ಪಾರು ಮಾಡುವ ವಸ್ತುವಿನ ಅತ್ಯಧಿಕ ಆವಶ್ಯಕತೆ

ಮತ್ತು ಅತ್ಯಧಿಕ ಅನಿವಾರ್ಯತೆ ಮನುಷ್ಯನಿಗಿದೆ. ಪರಲೋಕದಲ್ಲಂತೂ ಅವನಿಗೆ ಇದರ ಆವಶ್ಯಕತೆ ಬಹಳ ತೀವ್ರವಾಗಿರುತ್ತದೆ.

ಸಂಕಟಗಳಲ್ಲೇ ಅತಿದೊಡ್ಡದು ಮತ್ತು ಕಷ್ಟಗಳಲ್ಲೇ ಅತಿಹಿರಿದು ಕಿಯಾಮತ್ ದಿನದ ಸಂಕಟ ಮತ್ತು ಕಷ್ಟಗಳಾಗಿವೆ. ಯಾರು ಈ ಲೋಕದಲ್ಲಿ ಅಲ್ಲಾಹನನ್ನು ಭಯಪಟ್ಟು ಜೀವಿಸುತ್ತಾನೋ ಅವನನ್ನು ಅಲ್ಲಾಹು ಕಿಯಾಮತ್ ದಿನದ ಸಂಕಟಗಳಿಂದ ಪಾರು ಮಾಡುತ್ತಾನೆ. ಆಗ ಅವನು ಆ ಮಹಾ ಸಂಕಷ್ಟಕಾರಿ ದಿನದಂದು ಸೌಭಾಗ್ಯ ಮತ್ತು ಮೋಕ್ಷವನ್ನು ಪಡೆದು ಜಯಗಳಿಸುತ್ತಾನೆ. ಆದ್ದರಿಂದ ಸಂಕಟಗಳನ್ನು ಅನುಭವಿಸುವವರು, ಅವರು ಆ ಸಂಕಟಗಳಿಂದ ಸುಲಭವಾಗಿ ಪಾರಾಗುವುದಕ್ಕಾಗಿ, ಎಲ್ಲ ವಿಷಯಗಳಲ್ಲೂ ಅಲ್ಲಾಹನನ್ನು ಭಯಪಟ್ಟು ಜೀವಿಸಬೇಕು.

ಕಷ್ಟವೆಂಬ ಸಂಕಟ, ಬಡತನವೆಂಬ ಸಂಕಟ, ಅನ್ಯಾಯವೆಂಬ ಸಂಕಟ, ಅಜ್ಞಾನವೆಂಬ ಸಂಕಟ, ಪಾಪ ಮತ್ತು ದೋಷಗಳೆಂಬ ಸಂಕಟ, ಶಿರ್ಕ್ ಮತ್ತು ಕುಫ್ರ್ ಎಂಬ ಸಂಕಟ ಮುಂತಾದ ಎಲ್ಲ ಸಂಕಟಗಳನ್ನು ನಿವಾರಿಸುವ ಹೆಬ್ಬಾಗಿಲು ತಕ್ವಾ ಆಗಿದೆ. ಇದು ಮತ್ತು ಇದರಂತಿರುವ ಇತರ ರೋಗಗಳಿಗಿರುವ ಏಕೈಕ ಮದ್ದು ಅಲ್ಲಾಹು ಮತ್ತು ಅವನ ರಸೂಲರು ನಿಷಿದ್ಧಗೊಳಿಸಿದ ಕಾರ್ಯಗಳಿಂದ ದೂರವಾಗಿ ಅಲ್ಲಾಹನನ್ನು ಭಯಪಟ್ಟು ಜೀವಿಸುವುದಾಗಿದೆ.

ಅಜ್ಞಾನವೆಂಬ ಸಂಕಟದಿಂದ ಪಾರಾಗಲು ಅಲ್ಲಾಹನ ಧರ್ಮದ ಬಗ್ಗೆ ಅರಿವನ್ನು ಪಡೆಯಬೇಕಾಗಿದೆ. ಅದೇ ರೀತಿ ಇಹಲೋಕ ಮತ್ತು ಪರಲೋಕದ ಅಂತ್ಯ ಪರಿಣಾಮಗಳಿಂದ ಪಾರಾಗಲು ಪಾಪ ಮತ್ತು ದೋಷಗಳಿಂದ ದೂರವಾಗಿ ಅವುಗಳ ಬಗ್ಗೆ ಎಚ್ಚರ ವಹಿಸಬೇಕಾಗಿದೆ. ಪಾಪಗಳಿಗೆ ಇಹಲೋಕದಲ್ಲಿಯೇ ಬಹಳ ಕೆಟ್ಟ ಅಂತ್ಯ ಪರಿಣಾಮಗಳಿವೆ. ನೈಸರ್ಗಿಕ ಶಿಕ್ಷೆಗಳು ಅಥವಾ ಶರೀಅತ್ತಿನ ಪ್ರಕಾರವಿರುವ ಶಿಕ್ಷೆಗಳಿವೆ. ಪರಲೋಕದಲ್ಲೂ ಅದಕ್ಕೆ ಶಿಕ್ಷೆಯಿದೆ. ಅದರಲ್ಲಿ ಮೊದಲನೆಯದು ಗೋರಿಯಲ್ಲಿರುವ ಶಿಕ್ಷೆ. ನಂತರ ಪುನರುತ್ಥಾನ ದಿನ ಗೋರಿಯಿಂದ ಹೊರ ಬಂದಾಗ ಕಿಯಾಮತ್ ದಿನ ಬೇರೆಯೇ ಹಲವಾರು ಶಿಕ್ಷೆಗಳಿವೆ.

ಪಾಪ ಮತ್ತು ದೋಷಗಳ ಇನ್ನೊಂದು ಶಿಕ್ಷೆಯೇನೆಂದರೆ ತಕ್ವಾದ ಅಭಾವದಿಂದಾಗಿ ತಕ್ಕಡಿಯು ಹಗುರವಾಗುವುದು. ತಕ್ವಾದಲ್ಲಿ ಅಚಲವಾಗಿ ನೆಲೆನಿಲ್ಲುವವರ ತಕ್ಕಡಿ ಭಾರವಾಗುತ್ತದೆ. ತಕ್ವಾದಲ್ಲಿ ಅಚಲವಾಗಿ ನೆಲೆನಿಲ್ಲುವವರಿಗೆ ಅವರ ಬಲಗೈಯಲ್ಲಿ ಗ್ರಂಥವನ್ನು ನೀಡಲಾಗುವುದು. ತಕ್ವಾದಿಂದ ವಿಮುಖರಾಗುವವರಿಗೆ ಎಡಗೈಯಲ್ಲಿ ಗ್ರಂಥವನ್ನು ನೀಡಲಾಗುವುದು. ತಕ್ವಾದಲ್ಲಿ ಅಚಲವಾಗಿ ನೆಲೆನಿಲ್ಲುವವರನ್ನು ಸ್ವರ್ಗಕ್ಕೆ ಆಮಂತ್ರಿಸಲಾಗುವುದು. ತಕ್ವಾವನ್ನು ಹಾಳು ಮಾಡಿದವರನ್ನು ಮತ್ತು ಅದಕ್ಕೆ ವಿರುದ್ಧವಾಗಿ ನಡೆದವರನ್ನು ನರಕಕ್ಕೆ ಸಾಗಿಸಲಾಗುವುದು.

ಇಹಲೋಕದಲ್ಲಿ ಧರ್ಮಸಮ್ಮತವಾದ ಶುದ್ಧವಾದ ಆಹಾರ ಮತ್ತು ಪರಲೋಕದಲ್ಲಿ ಶಾಶ್ವತವಾದ ಅನುಗ್ರಹಗಳ ಆವಶ್ಯಕತೆ ಮನುಷ್ಯನಿಗಿದೆ. ಪರಲೋಕದ ಅನುಗ್ರಹವು ಅತ್ಯುತ್ತಮವಾದ ಮತ್ತು ಅತಿದೊಡ್ಡ ಅನುಗ್ರಹವಾಗಿದೆ. ಅದಕ್ಕಿಂತ ದೊಡ್ಡ ಅನುಗ್ರಹ ಬೇರೆಯಿಲ್ಲ. ಆದರೆ ಆ ಅನುಗ್ರಹವನ್ನು ಪಡೆಯಲು ತಕ್ವಾದ ಹೊರತು ಬೇರೆ ಮಾರ್ಗಗಳಿಲ್ಲ. ಆದ್ದರಿಂದ ಯಾರು ಇಹಲೋಕದಲ್ಲಿ ಗೌರವವನ್ನು, ಧರ್ಮಸಮ್ಮತವಾದ ಆಹಾರವನ್ನು ಮತ್ತು ಪರಲೋಕದಲ್ಲಿ ಅನುಗ್ರಹವನ್ನು ಬಯಸುತ್ತಾನೋ ಅವನು ತಕ್ವಾದಿಂದ ಜೀವಿಸಬೇಕಾಗಿದೆ.

ಮನುಷ್ಯನಿಗೆ ಅರಿವು, ಒಳನೋಟ ಮತ್ತು ಮಾರ್ಗದರ್ಶನದ ಆವಶ್ಯಕತೆಯಿದೆ. ಆದರೆ ಅದನ್ನು ಪಡೆಯಲು ತಕ್ವಾದ ಹೊರತು ಬೇರೆ ಮಾರ್ಗಗಳಿಲ್ಲ.

ಅಲ್ಲಾಹು(ﷻ) ಹೇಳುತ್ತಾನೆ:

﴿ يَٰٓأَيُّهَا ٱلَّذِينَ ءَامَنُوٓاْ إِن تَتَّقُواْ
ٱللَّهَ يَجۡعَل لَّكُمۡ فُرۡقَانٗا ﴾

“ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹನನ್ನು ಭಯಪಟ್ಟು ಜೀವಿಸಿದರೆ ಅವನು ನಿಮಗೆ ಫುರ್ಕಾನನ್ನು ದಯಪಾಲಿಸುತ್ತಾನೆ.” (ಸೂರ ಅಲ್‌ಅನ್ಫಾಲ್ 29)

ವಿದ್ವಾಂಸರು ಹೇಳುವ ಪ್ರಕಾರ ‘ಫುರ್ಕಾನ್’ ಎಂದರೆ: ಸತ್ಯಾಸತ್ಯಗಳನ್ನು, ಸನ್ಮಾರ್ಗ–ದುರ್ಮಾರ್ಗಗಳನ್ನು ಬೇರ್ಪಡಿಸಿ ತೋರಿಸುವ ಬೆಳಕು.

ಜ್ಞಾನವನ್ನು ಪಡೆಯಲು, ಧರ್ಮದ ವಿಷಯದಲ್ಲಿ ಪಾಂಡಿತ್ಯವನ್ನು ಸಂಪಾದಿಸಲು ಪರಿಶ್ರಮಿಸುವುದು ತಕ್ವಾದಲ್ಲಿ ಒಳಪಡುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ. ಅದರ ಮೂಲಕ ಬೆಳಕು ಮತ್ತು ಮಾರ್ಗದರ್ಶನ ಲಭ್ಯವಾಗುತ್ತದೆ. ಬೆಳಕು ಮತ್ತು ಮಾರ್ಗದರ್ಶನವೇ ಫುರ್ಕಾನ್.

ಆದ್ದರಿಂದ ತಕ್ವಾ ಎನ್ನುವುದು ಒಂದು ಸಮಗ್ರ (ಎಲ್ಲವನ್ನು ಒಳಗೊಳ್ಳುವ) ಪದ. ಅದರ ನಿಜವಾದ ಅರ್ಥ ವಿಶ್ವಾಸ ಮತ್ತು ಸತ್ಕರ್ಮ.

ಅಲ್ಲಾಹು(ﷻ) ಹೇಳುತ್ತಾನೆ:

﴿إِنَّ ٱلَّذِينَ ءَامَنُواْ وَعَمِلُواْ ٱلصَّٰلِحَٰتِ
لَهُمۡ جَنَّٰتُ ٱلنَّعِيمِ ٨﴾

“ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಿಗೆ ಅನುಗ್ರಹಪೂರ್ಣ ಸ್ವರ್ಗೋದ್ಯಾನಗಳಿವೆ.” (ಸೂರ ಲುಕ್ಮಾನ್ 8)

﴿مَنۡ عَمِلَ صَٰلِحٗا مِّن ذَكَرٍ أَوۡ أُنثَىٰ وَهُوَ
مُؤۡمِنٞ فَلَنُحۡيِيَنَّهُۥ حَيَوٰةٗ طَيِّبَةٗۖ وَلَنَجۡزِيَنَّهُمۡ
أَجۡرَهُم بِأَحۡسَنِ مَا كَانُواْ يَعۡمَلُونَ ٩٧﴾

“ಗಂಡಾಗಲಿ, ಹೆಣ್ಣಾಗಲಿ ಯಾರು ಸತ್ಯವಿಶ್ವಾಸಿಯಾಗಿದ್ದು ಸತ್ಕರ್ಮವೆಸಗುತ್ತಾರೋ ಅವರಿಗೆ ನಾವು ಅತ್ಯುತ್ತಮವಾದ ಜೀವನವನ್ನು ದಯಪಾಲಿಸುವೆವು. ಅವರು ಮಾಡಿರುವ ಅತ್ಯುತ್ತಮ ಕರ್ಮಗಳ ಆಧಾರದಲ್ಲಿ ನಾವು ಅವರಿಗೆ ಅವರ ಪ್ರತಿಫಲವನ್ನು ನೀಡುವೆವು.” (ಸೂರ ಅನ್ನಹ್ಲ್ 97)

ಆದ್ದರಿಂದ ತಕ್ವಾ ಎಂದರೆ ಅಲ್ಲಾಹನಲ್ಲಿ ಮತ್ತು ಅವನ ರಸೂಲರಲ್ಲಿ ಸತ್ಯಸಂಧವಾಗಿ ವಿಶ್ವಾಸವಿಡುವುದು. ಪ್ರವಾದಿಗಳು ತಿಳಿಸಿಕೊಟ್ಟ ಭಾವೀ ವಿಷಯಗಳಲ್ಲಿ ಅಚಂಚಲವಾಗಿ ವಿಶ್ವಾಸವಿಡುವುದು. ನಂತರ ಅವುಗಳ ಆಧಾರದಲ್ಲಿ ಸತ್ಕರ್ಮವೆಸಗುವುದು. ಇದು ವಿಶ್ವಾಸದ ಅತ್ಯಾವಶ್ಯಕವಾದ ಮತ್ತು ಅನಿವಾರ್ಯವಾದ ಘಟಕವಾಗಿದೆ.

ಈಗಾಗಲೇ ಹೇಳಿದಂತೆ ಜ್ಞಾನಾರ್ಜನೆ ಮತ್ತು ಧಾರ್ಮಿಕ ಪಾಂಡಿತ್ಯವು ತಕ್ವಾದಲ್ಲಿ ಒಳಪಟ್ಟದ್ದಾಗಿದೆ. ಆದ್ದರಿಂದಲೇ ಅಲ್ಲಾಹು ಫುರ್ಕಾನನ್ನು ತಕ್ವಾದ ಆಧಾರದಲ್ಲಿಟ್ಟಿದ್ದಾನೆ. ಕಾರಣ ಜ್ಞಾನಾರ್ಜನೆ ಮತ್ತು ಧಾರ್ಮಿಕ ಪಾಂಡಿತ್ಯ ತಕ್ವಾದ ಶಾಖೆಗಳಲ್ಲಿ ಒಳಪಡುತ್ತದೆ. ಅದೇ ರೀತಿ ಪ್ರವಾದಿ(ﷺ) ಯವರು ಏನನ್ನು ತಂದರೋ ಅದರ ಬಗ್ಗೆಯಿರುವ ತಿಳುವಳಿಕೆ ಕೂಡ ತಕ್ವಾದಲ್ಲಿ ಒಳಪಡುತ್ತದೆ.

ಕೆಲವೊಮ್ಮೆ ಮನುಷ್ಯನ ಮುಂದೆ ಎಲ್ಲ ದಾರಿಗಳು ಕಡಿದು ಹೋಗುತ್ತವೆ, ಅಥವಾ ಮುಚ್ಚಿ ಹೋಗುತ್ತವೆ. ಈ ಎಲ್ಲ ಸಂಕಟಗಳಿಂದ ಪಾರಾಗುವುದಕ್ಕಿರುವ ಕೀಲಿಕೈ ತಕ್ವಾ ಆಗಿದೆ. ತಕ್ವಾ ಈ ಎಲ್ಲಾ ಕಾರ್ಯಗಳನ್ನು ಸುಲಭಗೊಳಿಸುತ್ತದೆ.

ಅಲ್ಲಾಹು(ﷻ) ಹೇಳುತ್ತಾನೆ:

﴿وَمَن يَتَّقِ ٱللَّهَ يَجۡعَل لَّهُۥ مِنۡ أَمۡرِهِۦ يُسۡرٗا ٤﴾

“ಯಾರು ಅಲ್ಲಾಹನನ್ನು ಭಯಪಟ್ಟು ಜೀವಿಸುತ್ತಾನೋ ಅವನ ಕಾರ್ಯವನ್ನು ಅಲ್ಲಾಹು ಸುಲಭಗೊಳಿಸಿಕೊಡುವನು.” (ಸೂರ ಅತ್ತಲಾಕ್ 4)

ಸಲಫು ಸ್ವಾಲಿಹ್‌ಗಳು, ಅಂದರೆ ಸಹಾಬಾಗಳು ಇದನ್ನು ಪ್ರಾಯೋಗಿಕವಾಗಿ ತೋರಿಸಿಕೊಟ್ಟಿದ್ದಾರೆ. ಅಲ್ಲಾಹು ಮನುಷ್ಯರ ಮಾರ್ಗದರ್ಶನಕ್ಕಾಗಿ ಕಳುಹಿಸಿದ ಪ್ರವಾದಿಗಳು ಕೂಡ ಇದನ್ನು ಪ್ರಾಯೋಗಿಕವಾಗಿ ತೋರಿಸಿಕೊಟ್ಟಿದ್ದಾರೆ. ಅವರು ತಕ್ವಾದ ಮೂಲಕ ಎಲ್ಲ ಒಳಿತುಗಳನ್ನೂ ಪಡೆದರು. ಅದರ ಮೂಲಕ ಸೌಭಾಗ್ಯದ ಎಲ್ಲ ಬಾಗಿಲುಗಳನ್ನೂ ತೆರೆದರು. ಅದರ ಮೂಲಕ ಶತ್ರುಗಳ ವಿರುದ್ಧ ಜಯಗಳಿಸಿದರು. ಅದರ ಮೂಲಕ ಹೃದಯಗಳನ್ನು ಗೆದ್ದರು. ಮನುಷ್ಯರಾಶಿಯನ್ನು ನೇರಮಾರ್ಗದ ಕಡೆಗೆ ಒಯ್ದರು.

ಅವರಿಗೆ ನಾಯಕ ಸ್ಥಾನ, ಉನ್ನತ ಕೀರ್ತಿ, ಒಂದರ ಮೇಲೊಂದರಂತೆ ಗೆಲುವು ಲಭ್ಯವಾದುದು ಅವರ ತಕ್ವಾದ ಕಾರಣದಿಂದಾಗಿದೆ. ಅಲ್ಲಾಹನ ಆಜ್ಞೆಗಳನ್ನು ಪಾಲಿಸಿದ ಕಾರಣದಿಂದಾಗಿದೆ. ಅವನ ಧರ್ಮಕ್ಕೆ ಸಹಾಯ ಮಾಡಿದ ಕಾರಣದಿಂದಾಗಿದೆ. ತೌಹೀದ್ ಮತ್ತು ಅನುಸರಣೆಯಲ್ಲಿ ಅವರು ಒಗ್ಗಟ್ಟಾದುದರಿಂದಾಗಿದೆ.

ತಮ್ಮ ಪಾಪಗಳು ಕ್ಷಮಿಸಲ್ಪಡಬೇಕೆಂಬ, ದೋಷಗಳು ನಿವಾರಣೆಯಾಗಬೇಕೆಂಬ ಅತೀವ ಆವಶ್ಯಕತೆ ಮನುಷ್ಯರಿಗಿದೆ. ಇದಕ್ಕಿರುವ ಮಾರ್ಗ ಕೂಡ ತಕ್ವಾ ಮಾತ್ರ.

ಅಲ್ಲಾಹು(ﷻ) ಹೇಳುತ್ತಾನೆ:

﴿إِن تَتَّقُواْ ٱللَّهَ يَجۡعَل لَّكُمۡ فُرۡقَانٗا وَيُكَفِّرۡ
عَنكُمۡ سَيِّـَٔاتِكُمۡ وَيَغۡفِرۡ لَكُمۡۗ﴾

“ನೀವು ಅಲ್ಲಾಹನನ್ನು ಭಯಪಟ್ಟು ಜೀವಿಸಿದರೆ ಅವನು ನಿಮಗೆ ಸತ್ಯಾಸತ್ಯವನ್ನು ಅರಿಯುವ ಶಕ್ತಿಯನ್ನು ನೀಡುತ್ತಾನೆ, ನಿಮ್ಮ ದೋಷಗಳನ್ನು ಅಳಿಸುತ್ತಾನೆ ಮತ್ತು ನಿಮ್ಮನ್ನು ಕ್ಷಮಿಸುತ್ತಾನೆ.” (ಸೂರ ಅಲ್‌ಅನ್ಫಾಲ್ 29)

ಅಲ್ಲಾಹು(ﷻ) ಹೇಳುತ್ತಾನೆ:

﴿وَمَن يَتَّقِ ٱللَّهَ يُكَفِّرْ عَنْهُ سَيِّـَٔاتِهِۦ وَيُعْظِمْ لَهُۥٓ أَجْرًا ۝٥﴾

"ಯಾರು ಅಲ್ಲಾಹನನ್ನು ಭಯಪಟ್ಟು ಜೀವಿಸುತ್ತಾನೋ ಅವನ ದೋಷಗಳನ್ನು ಅಲ್ಲಾಹು ಅಳಿಸುತ್ತಾನೆ ಮತ್ತು ಅವನ ಪ್ರತಿಫಲ-ವನ್ನು ಹೆಚ್ಚಿಸುತ್ತಾನೆ." (ಸೂರ ಅತ್ತಲಾಕ್ 5)

ಪ್ರತಿಫಲವನ್ನು ಹೆಚ್ಚಿಸುವುದು ಎಂದರೆ ಸ್ವರ್ಗವನ್ನು ಪಡೆಯುವುದು ಮತ್ತು ನರಕದಿಂದ ಪಾರಾಗುವುದು.

ಅದೇ ರೀತಿ ಮುಸಲ್ಮಾನರು ಶತ್ರುಗಳ ವಿರುದ್ಧ ಸಹಾಯ ಲಭ್ಯವಾ-ಗಬೇಕೆಂದು ಮತ್ತು ಅವರ ತಂತ್ರಗಳಿಂದ ಸುರಕ್ಷಿತರಾಗಬೇಕೆಂದು ಅತಿಯಾಗಿ ಬಯಸುತ್ತಾರೆ. ಆದರೆ ಅದನ್ನು ಪಡೆಯಲು ತಕ್ವಾದ ಹೊರತು ಬೇರೆ ಮಾರ್ಗಗಳಿಲ್ಲ.

ಅಲ್ಲಾಹು(ﷻ) ಹೇಳುತ್ತಾನೆ:

﴿وَإِن تَصْبِرُوا۟ وَتَتَّقُوا۟ لَا يَضُرُّكُمْ كَيْدُهُمْ شَيْـًٔا ۗ إِنَّ ٱللَّهَ بِمَا يَعْمَلُونَ مُحِيطٌ ۝١٢٠﴾

"ನೀವು ಸಹನೆಯಿಂದ ಮತ್ತು ತಕ್ವಾದಿಂದ ಜೀವಿಸಿದರೆ ಅವರ ತಂತ್ರಗಳು ನಿಮಗೆ ಯಾವುದೇ ತೊಂದರೆಯನ್ನು ನೀಡದು. ಖಂಡಿತವಾಗಿಯೂ ಅಲ್ಲಾಹು ಅವರು ಮಾಡುವುದೆಲ್ಲವನ್ನೂ ಆವರಿಸಿಕೊಂಡಿದ್ದಾನೆ." (ಸೂರ ಆಲು ಇಮ್ರಾನ್ 120)

ಆದ್ದರಿಂದ ಮುಸಲ್ಮಾನರು ಅಲ್ಲಾಹನನ್ನು ಅನುಸರಿಸುವ ವಿಷಯದಲ್ಲಿ, ಶತ್ರುಗಳ ವಿರುದ್ಧ ಹೋರಾಡುವ ವಿಷಯದಲ್ಲಿ ಸಹನೆ ವಹಿಸಿದರೆ, ದೈಹಿಕ, ಆರ್ಥಿಕ, ಕಾರ್ಷಿಕ ಸಂಪನ್ಮೂಲಗಳ ಮೂಲಕ, ಶಸ್ತ್ರಾಸ್ತ್ರಗಳ ಮೂಲಕ ಇತ್ಯಾದಿ ಶತ್ರುಗಳ ವಿರುದ್ಧ ಸಿದ್ಧತೆಗಳನ್ನು ಮಾಡಿಕೊಂಡು ಅಲ್ಲಾಹನನ್ನು ಭಯಪಟ್ಟು ಜೀವಿಸಿದರೆ ಅವರಿಗೆ ಅವರ ಶತ್ರುಗಳ ವಿರುದ್ಧ ಸಹಾಯ ಲಭ್ಯವಾಗುತ್ತದೆ. ಏಕೆಂದರೆ ಇವೆಲ್ಲವೂ ತಕ್ವಾದಲ್ಲಿ ಒಳಪಟ್ಟದ್ದಾಗಿದೆ.

ಇದರಲ್ಲಿ ಅತಿ ಪ್ರಮುಖವಾದುದು ಎಲ್ಲ ವಿಷಯಗಳಲ್ಲೂ ತಯಾರಿ-ಗಳನ್ನು ಮಾಡಿಕೊಂಡಿರುವುದು. ದೈಹಿಕ ತರಬೇತಿ, ವೃತ್ತಿ ತರಬೇತಿ, ಶಸ್ತ್ರಾಸ್ತ್ರ ತರಬೇತಿ ಇತ್ಯಾದಿ. ಅದೇ ರೀತಿ ಆರ್ಥಿಕ ತಯಾರಿ, ಕೃಷಿ ಮತ್ತು ಕಾರ್ಖಾನೆಗಳಿಗೆ ಪ್ರೋತ್ಸಾಹ ಇತ್ಯಾದಿಗಳು ಕೂಡ ಜಿಹಾದ್‌ಗೆ ನೆರವು ನೀಡುವ ಅಂಶಗಳಾಗಿವೆ. ಶತ್ರುಗಳ ಕೈಯಲ್ಲಿರುವುದನ್ನು ಖರೀದಿಸುವ ಪರಿಸ್ಥಿತಿ ಮುಸಲ್ಮಾನರಿಗೆ ಬರಬಾರದು. ಇವೆಲ್ಲವೂ ಅಲ್ಲಾಹನ ಈ ವಚನದಲ್ಲಿ ಒಳಪಡುತ್ತದೆ.

﴿وَأَعِدُّوا۟ لَهُم مَّا ٱسْتَطَعْتُم مِّن قُوَّةٍ﴾

"ನಿಮಗೆ ಸಾಧ್ಯವಾಗುವ ಎಲ್ಲ ಶಕ್ತಿಗಳನ್ನು ಅವರಿಗಾಗಿ ಸಿದ್ಧ-ಪಡಿಸಿರಿ." (ಸೂರ ಅಲ್‌ಅನ್ಫಾಲ್ 60) ಇದು ಸಹನೆಯಿಂದ-ಲ್ಲದೆ ಸಾಧ್ಯವಾಗಲಾರದು.

ಸಹನೆಯು ತಕ್ವಾದ ಶಾಖೆಗಳಲ್ಲೇ ಪ್ರಮುಖವಾದುದು. ಅಲ್ಲಾಹು (ﷻ) ಇದನ್ನು ಒತ್ತಿ ಹೇಳಿದ್ದಾನೆ. ಆದ್ದರಿಂದ ಶತ್ರುಗಳ ವಿರುದ್ಧ ಜಿಹಾದ್ ಮಾಡುವಾಗ ಸಹನೆ ಅತ್ಯಗತ್ಯ. ಅಡಗುದಾಣಗಳಲ್ಲಿ ಹೊಂಚು ಹಾಕುವಾಗ ಸಹನೆ ಅತ್ಯಗತ್ಯ. ತನು, ಮನ, ಧನಗಳಿಂದ ಸಿದ್ಧತೆಗಳನ್ನು ಮಾಡಿಕೊಳ್ಳುವಾಗಲೂ, ತರಬೇತಿಗಳನ್ನು ಸಿದ್ಧಪಡಿ-ಸುವಾಗಲೂ ಸಹನೆ ಅತ್ಯಗತ್ಯ. ಅದೇ ರೀತಿ ಶತ್ರುಗಳ ಶಸ್ತ್ರಾಸ್ತ್ರಗಳಿಗೆ ಸಮಾನವಾದ ಅಥವಾ ಅದಕ್ಕಿಂತಲೂ ಉನ್ನತವಾದ ಶಸ್ತ್ರಾಸ್ತ್ರ-ಗಳನ್ನು ತಮಗೆ ಸಾಧ್ಯವಾಗುವಷ್ಟು ತಯಾರಿ ಮಾಡುವಾಗಲೂ ಸಹನೆ ಅತ್ಯಗತ್ಯ.

ಈ ಸಹನೆಯ ಜೊತೆಗೆ ಅಲ್ಲಾಹು ಕಡ್ಡಾಯಗೊಳಿಸಿದ್ದನ್ನು ನಿರ್ವಹಿಸುವ ಮತ್ತು ವಿರೋಧಿಸಿದ್ದನ್ನು ತ್ಯಜಿಸುವ ತಕ್ವಾ ಕೂಡ ಇರಬೇಕಾಗಿದೆ. ಅವನು ವಿಧಿಸಿದ ಗಡಿಗಳನ್ನು ದಾಟಬಾರದು. ಅವನ ಮುಂದೆ ಸಂಪೂರ್ಣ ಶರಣಾಗಬೇಕು. ಅವನು ಸಹಾಯ ಮಾಡುತ್ತಾನೆಂಬ ವಿಶ್ವಾಸವಿರಬೇಕು. ಅವನ ಕಡೆಯ ಸಹಾಯವು ಸೈನಿಕರ ಸಂಖ್ಯೆ ಅಥವಾ ಪೂರ್ವ ತಯಾರಿಯ ಹೆಚ್ಚಳದ ಆಧಾರ-ದಲ್ಲಲ್ಲ ಎಂದು ಅರಿಯಬೇಕು. ಅಥವಾ ಇನ್ನಿತರ ಯಾವುದೇ ಮಾರ್ಗದಿಂದಲೂ ಅಲ್ಲ ಎಂದು ಅರಿಯಬೇಕು. ಸಹಾಯ ಬರುವುದು ಅಲ್ಲಾಹನ ಕಡೆಯಿಂದ ಮಾತ್ರ. ಅವನು ಆ ಮಾರ್ಗ-ಗಳನ್ನು ಮಾಡಿರುವುದು ಹೃದಯಗಳನ್ನು ಶಾಂತಗೊಳಿಸಲು ಮತ್ತು ಸಂತೋಷಪಡಿಸಲು ಮಾತ್ರ.

ಅಲ್ಲಾಹು(ﷻ) ಹೇಳುತ್ತಾನೆ:

﴿وَمَا جَعَلَهُ ٱللَّهُ إِلَّا بُشْرَىٰ وَلِتَطْمَئِنَّ

بِهِۦ قُلُوبُكُمۡۚ وَمَا ٱلنَّصۡرُ إِلَّا مِنۡ عِندِ ٱللَّهِۚ
إِنَّ ٱللَّهَ عَزِيزٌ حَكِيمٌ ١٠﴾

“ಅವನು ಅದನ್ನು ಮಾಡಿರುವುದು ಒಂದು ಶುಭವಾರ್ತೆಯಾಗಿ ಮತ್ತು ಅದರ ಮೂಲಕ ನಿಮ್ಮ ಹೃದಯಗಳು ಶಾಂತವಾಗುವುದಕ್ಕಾಗಿ ಮಾತ್ರ. ಅಲ್ಲಾಹನ ಕಡೆಯಿಂದಲ್ಲದೆ ಬೇರೆ ಸಹಾಯವೇ ಇಲ್ಲ.” (ಸೂರ ಅಲ್‌ಅನ್ಫಾಲ್ 10)

ಅಲ್ಲಾಹು(ﷻ) ಹೇಳುತ್ತಾನೆ:

﴿يَٰٓأَيُّهَا ٱلَّذِينَ ءَامَنُوٓاْ إِن تَنصُرُواْ ٱللَّهَ
يَنصُرۡكُمۡ وَيُثَبِّتۡ أَقۡدَامَكُمۡ ٧﴾

“ಓ ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹನಿಗೆ ಸಹಾಯ ಮಾಡಿದರೆ ಅವನು ನಿಮಗೆ ಸಹಾಯ ಮಾಡುತ್ತಾನೆ ಮತ್ತು ನಿಮ್ಮ ಪಾದಗಳನ್ನು ಅಚಲವಾಗಿಡುತ್ತಾನೆ.” (ಸೂರ ಮುಹಮ್ಮದ್ 7)

ಅಲ್ಲಾಹು(ﷻ) ಹೇಳುತ್ತಾನೆ:

﴿وَلَيَنصُرَنَّ ٱللَّهُ مَن يَنصُرُهُۥٓۚ إِنَّ ٱللَّهَ
لَقَوِيٌّ عَزِيزٌ ٤٠ ٱلَّذِينَ إِن مَّكَّنَّٰهُمۡ فِي
ٱلۡأَرۡضِ أَقَامُواْ ٱلصَّلَوٰةَ وَءَاتَوُاْ ٱلزَّكَوٰةَ
وَأَمَرُواْ بِٱلۡمَعۡرُوفِ وَنَهَوۡاْ عَنِ ٱلۡمُنكَرِۗ﴾

“ಅಲ್ಲಾಹನಿಗೆ ಸಹಾಯ ಮಾಡುವವರಿಗೆ ಖಂಡಿತವಾಗಿಯೂ ಅಲ್ಲಾಹು ಸಹಾಯ ಮಾಡುತ್ತಾನೆ. ಖಂಡಿತವಾಗಿಯೂ ಅಲ್ಲಾಹು ಶಕ್ತಿಶಾಲಿಯೂ ಪ್ರತಾಪಿಯೂ ಆಗಿದ್ದಾನೆ. ಅವರಿಗೆ ನಾವು ಭೂಮಿಯಲ್ಲಿ ಅಧಿಕಾರವನ್ನು ನೀಡಿದರೆ ಅವರು ನಮಾಝನ್ನು ಸಂಸ್ಥಾಪಿಸುತ್ತಾರೆ, ಝಕಾತ್ ನೀಡುತ್ತಾರೆ, ಸದಾಚಾರವನ್ನು ಆದೇಶಿಸುತ್ತಾನೆ ಮತ್ತು ದುರಾಚಾರವನ್ನು ವಿರೋಧಿಸುತ್ತಾರೆ.”

ಈ ಕರ್ಮಗಳೆಲ್ಲವೂ ತಕ್ವಾದ ಶಾಖೆಗಳಲ್ಲಿ ಸೇರಿದ್ದಾಗಿವೆ. ಇದರಿಂದ ಅಲ್ಲಾಹನ ಈ ವಚನದ ಅರ್ಥವನ್ನು ತಿಳಿದುಕೊಳ್ಳಬಹುದು.

﴿وَإِن تَصۡبِرُواْ وَتَتَّقُواْ لَا
يَضُرُّكُمۡ كَيۡدُهُمۡ شَيۡـًٔاۗ﴾

“ನೀವು ಸಹನೆ ವಹಿಸಿದರೆ ಮತ್ತು ಭಯಪಟ್ಟು ಜೀವಿಸಿದರೆ ಅವರ ಯಾವುದೇ ಕುತಂತ್ರವು ನಿಮಗೆ ಹಾನಿ ಮಾಡದು.” (ಸೂರ ಆಲು ಇಮ್ರಾನ್ 120)

ಮುಸಲ್ಮಾನರಿಗೆ ಇಹಲೋಕ ಮತ್ತು ಪರಲೋಕದಲ್ಲಿ ಸಹಾಯ, ಗೌರವ, ಮೋಕ್ಷ ಬೇಕು ಎಂದಾದರೆ, ಅವರ ಸಂಕಟಗಳು ನಿವಾರಣೆಯಾಗಬೇಕಾದರೆ, ಅವರ ಕಾರ್ಯಕಲಾಪಗಳು ಸುಲಲಿತವಾಗಿ ಸಾಗಬೇಕಾದರೆ, ಅವರ ಪಾಪಗಳು ಕ್ಷಮಿಸಲ್ಪಡಬೇಕಾದರೆ, ಅವರ ದೋಷಗಳು ಅಳಿಯಬೇಕಾದರೆ, ಅವರಿಗೆ ಸ್ವರ್ಗಪ್ರಾಪ್ತಿಯಾಗಬೇಕಾದರೆ ಅವರು ಅಲ್ಲಾಹನನ್ನು ಭಯಪಟ್ಟು ತಕ್ವಾದೊಂದಿಗೆ ಜೀವಿಸಬೇಕು.

ಸ್ವರ್ಗವಾಸಿಗಳಾದ ಮುತ್ತಕಿಗಳನ್ನು ವಿವರಿಸುತ್ತಾ ಅಲ್ಲಾಹು ಹೇಳುತ್ತಾನೆ.

﴿إِنَّ ٱلۡمُتَّقِينَ فِي جَنَّٰتٖ وَعُيُونٍ ١٥﴾

“ಖಂಡಿತವಾಗಿಯೂ ಮುತ್ತಕಿಗಳು ಸ್ವರ್ಗೋದ್ಯಾನಗಳಲ್ಲಿ ಮತ್ತು ತೊರೆಗಳಲ್ಲಿರುವವರು.” (ಸೂರ ಅದ್ದಾರಿಯಾತ್ 15)

ಅಲ್ಲಾಹು(ﷻ) ಹೇಳುತ್ತಾನೆ:

﴿إِنَّ ٱلۡمُتَّقِينَ فِي جَنَّٰتٖ وَنَعِيمٖ ١٧﴾

“ಖಂಡಿತವಾಗಿಯೂ ಮುತ್ತಕಿಗಳು ಸ್ವರ್ಗೋದ್ಯಾನಗಳಲ್ಲಿ ಮತ್ತು ಅನುಗ್ರಹಗಳಲ್ಲಿರುವವರು.” (ಸೂರ ಅತ್ತೂರ್ 17)

ಅಲ್ಲಾಹು(ﷻ) ಹೇಳುತ್ತಾನೆ:

﴿إِنَّ لِلۡمُتَّقِينَ عِندَ رَبِّهِمۡ جَنَّٰتِ ٱلنَّعِيمِ ٣٤﴾

“ಖಂಡಿತವಾಗಿಯೂ ಮುತ್ತಕಿಗಳಿಗೆ ಅವರ ರಬ್ಬಿನ ಬಳಿ ಅನುಗ್ರಹಪೂರ್ಣ ಸ್ವರ್ಗೋದ್ಯಾನಗಳಿವೆ.” (ಸೂರ ಅಲ್‌ಕಲಮ್ 34)

ತಾನು ಸ್ವರ್ಗಲೋಕವನ್ನು ಸಿದ್ಧಗೊಳಿಸಿರುವುದು ತಕ್ವಾದಿಂದ ಜೀವಿಸುವವರಿಗೆ ಎಂದು ಅಲ್ಲಾಹು ಇಲ್ಲಿ ಸ್ಪಷ್ಟಪಡಿಸಿದ್ದಾನೆ. ಆದ್ದರಿಂದ ನೀನು ಅಲ್ಲಾಹನನ್ನು ಭಯಪಟ್ಟು ಜೀವಿಸಬೇಕಾದುದು ಎಷ್ಟು ಅನಿವಾರ್ಯವೆಂದು ನಿನಗೆ ಈಗ ತಿಳಿದಿರಬಹುದು. ನೀವು ಅಲ್ಲಾಹನನ್ನು ಭಯಪಟ್ಟು ಜೀವಿಸಬೇಕಾದ ರೀತಿಯಲ್ಲಿ ಭಯಪಟ್ಟು ಜೀವಿಸುವಾಗಲೆಲ್ಲಾ ನೀವು ಒಳಿತುಗಳನ್ನು ಗೆಲ್ಲುತ್ತಲೇ ಇರುತ್ತೀರಿ. ಎಲ್ಲ ಕೆಡುಕುಗಳಿಂದ ಪಾರಾಗುತ್ತಲೂ ಇರುತ್ತೀರಿ.

ಇದರ ಅರ್ಥ ಅಲ್ಲಾಹು ನಿಮ್ಮನ್ನು ಪರೀಕ್ಷಿಸುವುದೇ ಇಲ್ಲ ಎಂದಲ್ಲ. ಕೆಲವೊಮ್ಮೆ ಅಲ್ಲಾಹು ನಿಮ್ಮನ್ನು ಪರೀಕ್ಷಿಸಲೂಬಹುದು. ಅಲ್ಲಾಹು ಪ್ರವಾದಿಗಳನ್ನು ಪರೀಕ್ಷಿಸಿದ್ದಾನೆ. ಅವರು ಅವನ ಸೃಷ್ಟಿಗಳಲ್ಲೇ ಅತಿಶ್ರೇಷ್ಠರು. ಮುತ್ತಕಿಗಳಲ್ಲೇ ಅತಿಶ್ರೇಷ್ಠರು. ಅವರ ಸಹನೆ ಮತ್ತು ಕೃತಜ್ಞತಾ ಮನೋಭಾವವನ್ನು ಜಗತ್ತಿಗೆ ತಿಳಿಸುವುದಕ್ಕಾಗಿ ಅಲ್ಲಾಹು ಅವರನ್ನು ಪರೀಕ್ಷಿಸಿದ್ದಾನೆ. ಆದ್ದರಿಂದ ಈ ವಿಷಯದಲ್ಲೂ ನಾವು ಅವರನ್ನು ಹಿಂಬಾಲಿಸಬೇಕು.

ಪರೀಕ್ಷೆಯ ಮೂಲಕ ಮನುಷ್ಯನ ಸಹನೆ ಮತ್ತು ಕೃತಜ್ಞತಾ ಮನೋಭಾವ ಬೆಳಕಿಗೆ ಬರುತ್ತದೆ. ಅಲ್ಲಾಹನ ಧರ್ಮದ ವಿಷಯದಲ್ಲಿ ಅವನಿಗಿರುವ ಆವೇಶ ಮತ್ತು ಶಕ್ತಿಯ ಅರಿವಾಗುತ್ತದೆ.

ಅಲ್ಲಾಹು(ﷻ) ಕೇಳುತ್ತಾನೆ:

﴿أَحَسِبَ ٱلنَّاسُ أَن يُتْرَكُوٓا۟ أَن يَقُولُوٓا۟ ءَامَنَّا وَهُمْ لَا يُفْتَنُونَ ﴿٢﴾﴾

“ನಾವು ವಿಶ್ವಾಸವಿಟ್ಟಿದ್ದೇವೆ ಎಂದು ಹೇಳಿದ ಕಾರಣಕ್ಕಾಗಿ ಜನರನ್ನು ಪರೀಕ್ಷಿಸದೆ ಬಿಟ್ಟುಬಿಡಲಾಗುವುದೆಂದು ಅವರು ಭಾವಿಸಿದ್ದಾರೆಯೇ?” (ಸೂರ ಅಲ್‌ಅನ್ಕಬೂತ್ 2)

ಅಲ್ಲಾಹು(ﷻ) ಹೇಳುತ್ತಾನೆ:

﴿وَلَقَدْ فَتَنَّا ٱلَّذِينَ مِن قَبْلِهِمْ ۖ فَلَيَعْلَمَنَّ ٱللَّهُ ٱلَّذِينَ صَدَقُوا۟ وَلَيَعْلَمَنَّ ٱلْكَـٰذِبِينَ ﴿٣﴾﴾

“ನಾವು ಅವರಿಗಿಂತ ಮುಂಚಿನವರನ್ನೂ ಪರೀಕ್ಷಿಸಿದ್ದೇವೆ. ಅವರಲ್ಲಿ ಸತ್ಯವನ್ನು ನುಡಿಯುವವರು ಯಾರು ಮತ್ತು ಸುಳ್ಳು ನುಡಿಯುವವರು ಯಾರೆಂದು ಅಲ್ಲಾಹು ತಿಳಿದೇ ತೀರುವನು.” (ಸೂರ ಅಲ್‌ಅನ್ಕಬೂತ್ 3)

ಪರೀಕ್ಷೆಗಳು ಬರುವುದು ಸಹಜ. ಅಲ್ಲಾಹು(ﷻ) ಹೇಳುತ್ತಾನೆ:

﴿وَلَنَبْلُوَنَّكُمْ حَتَّىٰ نَعْلَمَ ٱلْمُجَـٰهِدِينَ مِنكُمْ وَٱلصَّـٰبِرِينَ وَنَبْلُوَا۟ أَخْبَارَكُمْ ﴿٣١﴾﴾

“ನಿಮ್ಮಲ್ಲಿ ಜಿಹಾದ್ ಮಾಡುವವರು ಯಾರು, ಸಹನೆ ವಹಿಸುವವರು ಯಾರೆಂದು ಅರಿಯಲು ನಾನು ನಿಮ್ಮನ್ನು ಖಂಡಿತ ಪರೀಕ್ಷಿಸುವೆವು. ನಿಮ್ಮ ಸಂಗತಿಗಳನ್ನೂ ನಾವು ಪರೀಕ್ಷಿಸುವೆವು.” (ಸೂರ ಮುಹಮ್ಮದ್ 31)

ಅಲ್ಲಾಹು(ﷻ) ಹೇಳುತ್ತಾನೆ:

﴿وَنَبْلُوكُم بِٱلشَّرِّ وَٱلْخَيْرِ فِتْنَةً ۖ وَإِلَيْنَا تُرْجَعُونَ ﴿٣٥﴾﴾

“ನಾವು ನಿಮ್ಮನ್ನು ಕೆಡುಕು ಮತ್ತು ಒಳಿತುಗಳ ಮೂಲಕ ಪರೀಕ್ಷಿಸುವೆವು. ನೀವು ನಮ್ಮ ಬಳಿಗೇ ಮರಳಿ ಬರುವಿರಿ.” (ಸೂರ ಅಲ್‌ಅಂಬಿಯಾ 35)

ಅಲ್ಲಾಹು(ﷻ) ಹೇಳುತ್ತಾನೆ:

﴿وَبَلَوْنَـٰهُم بِٱلْحَسَنَـٰتِ وَٱلسَّيِّـَٔاتِ لَعَلَّهُمْ يَرْجِعُونَ ﴿١٦٨﴾﴾

“ನಾವು ಅವರನ್ನು ಒಳಿತು ಮತ್ತು ಕೆಡುಕುಗಳ ಮೂಲಕ ಪರೀಕ್ಷಿಸಿದೆವು. ಅವರು ಮರಳಿ ಬರುವುದಕ್ಕಾಗಿ.” (ಸೂರ ಅಲ್‌ಅಅ್‌ರಾಫ್ 168)

ಆದ್ದರಿಂದ ಪರೀಕ್ಷೆಗಳು ಬರುವುದು ಸ್ವಾಭಾವಿಕ. ಪ್ರವಾದಿಗಳು ಜನರಲ್ಲೇ ಶ್ರೇಷ್ಠರಾಗಿದ್ದರೂ ಸಹ ಅವರನ್ನು ಶತ್ರುಗಳ ಮೂಲಕ ಪರೀಕ್ಷಿಸಲಾಗಿದೆ.

ನೂಹ್(ؑ) ರ ಬಗ್ಗೆ ಅವರ ಜನರು ವರ್ತಿಸಿದ ರೀತಿ ನೋಡಿ. ಹೂದ್, ಸ್ವಾಲಿಹ್ ಮುಂತಾದವರ ಚರಿತ್ರೆಯನ್ನು ನೋಡಿ.

ಅವರೆಲ್ಲರಿಗಿಂತ ಹೆಚ್ಚಾಗಿ ಕಟ್ಟಕಡೆಯ ಪ್ರವಾದಿಯಾದ ನಮ್ಮ ಪ್ರವಾದಿ, ಮುಹಮ್ಮದ್(ﷺ) ರವರನ್ನೇ ನೋಡಿ. ಅವರು ಮುತ್ತಕಿಗಳ ಇಮಾಮರು, ಮುಜಾಹಿದ್‌ಗಳಲ್ಲೇ ಶ್ರೇಷ್ಠರು ಮತ್ತು ಸರ್ವಲೋ-ಕಗಳ ಒಡೆಯನ ಸಂದೇಶವಾಹಕರು. ಆದರೂ ಅವರು ಮಕ್ಕಾ ಮತ್ತು ಮದೀನದ ಯುದ್ಧಗಳಲ್ಲಿ ಎಷ್ಟೊಂದು ಕಷ್ಟಗಳನ್ನು ಎದುರಿ-ಸಿದ್ದರು! ಇವೆಲ್ಲ ಸಂದರ್ಭಗಳಲ್ಲೂ ಅವರು ಅತಿದೊಡ್ಡ ತಾಳ್ಮೆಯನ್ನು ಕೈಗೊಂಡರು. ಕೊನೆಗೆ ಅಲ್ಲಾಹು ಅವರಿಗೆ ಅವರ ಶತ್ರುಗಳ ವಿರುದ್ಧ ಜಯವನ್ನು ದಯಪಾಲಿಸಿದನು. ಅವರಿಗೆ ಮಕ್ಕಾ ನಗರವನ್ನು ಗೆಲ್ಲಿಸಿ ಕೊಟ್ಟು ಜನರು ಗುಂಪು ಗುಂಪಾಗಿ ಅಲ್ಲಾಹನ ಧರ್ಮವನ್ನು ಪ್ರವೇ-ಶಿಸುವಂತೆ ಮಾಡಿದನು.

ಅವರಿಗೆ ಮತ್ತು ಅವರ ಸಮುದಾಯಕ್ಕೆ ಅವನು ತನ್ನ ಅನುಗ್ರ-ಹಗಳನ್ನು ಪೂರ್ತಿಮಾಡಿ, ಅವರಿಗೆ ಅವರ ಧರ್ಮವನ್ನು ಪೂರ್ಣಗೊಳಿಸಿ, ಒಂದು ಮಹಾ ಪರೀಕ್ಷೆಯ ನಂತರ, ಒಂದು ಮಹಾ ತಾಳ್ಮೆಯ ನಂತರ ಅವರನ್ನು ತನ್ನ ಕಡೆಗೆ ಸೆಳೆದುಕೊಂಡನು. ಹೀಗಿರುವಾಗ ನಾವು ಮುತ್ತಕಿಗಳಾಗಿ ಜೀವಿಸಿದರೆ, ವಿಶ್ವಾಸಿಗಳಾಗಿ ಬದುಕಿದರೆ ನಮಗೆ ಯಾವುದೇ ಪರೀಕ್ಷೆ ಎದುರಾಗಲಾರದು, ಯಾವುದೇ ಅನರ್ಥ ಸಂಭವಿಸಲಾರದು ಎಂದು ನಾವು ನಿರ್ಭ-ಯರಾಗಿರುವುದು ಹೇಗೆ?

ವಾಸ್ತವ ಸ್ಥಿತಿ ಹಾಗಲ್ಲ. ಪರೀಕ್ಷೆಗಳು ಅನಿವಾರ್ಯ. ಯಾರು ತಾಳ್ಮೆ ವಹಿಸುತ್ತಾರೋ ಅವರ ಅಂತ್ಯವು ಉತ್ತಮವಾಗಿರುತ್ತದೆ. ಅಲ್ಲಾಹು (ﷻ) ಹೇಳುತ್ತಾನೆ:

﴿فَاصْبِرْ ۖ إِنَّ الْعَاقِبَةَ لِلْمُتَّقِينَ ﴿٤٩﴾﴾

“ತಾಳ್ಮೆ ವಹಿಸಿರಿ. ಮುತ್ತಕಿಗಳಿಗೆ ಸುಖಾಂತ್ಯವಿದೆ.” (ಸೂರ ಹೂದ್ 49)

﴿وَالْعَاقِبَةُ لِلتَّقْوَىٰ ﴿١٣٢﴾﴾

“ಸುಖಾಂತ್ಯವಿರುವುದು ತಕ್ವಾದಿಂದ ಜೀವಿಸುವವ-ರಿಗೆ.” (ಸೂರ ತಾಹಾ 132)

ತಕ್ವಾದಿಂದ ಜೀವಿಸುವ ಜನರಿಗೆ ಸುತ್ಯರ್ಹವಾದ ಅಂತ್ಯವಿದೆ. ಅವರು ಸಹನೆ ವಹಿಸಿದರೆ, ಪ್ರತಿಫಲವನ್ನು ಅಪೇಕ್ಷಿಸಿದರೆ, ನಿಷ್ಕ-ಳಂಕವಾಗಿ ಜೀವಿಸಿದರೆ, ಶತ್ರುಗಳ ವಿರುದ್ಧ ಮತ್ತು ಸ್ವಂತ ದೇಹದ ವಿರುದ್ಧ ಜಿಹಾದ್ ಮಾಡಿದರೆ ಇಹಲೋಕದಲ್ಲೂ ಪರಲೋಕದಲ್ಲೂ ಅವರಿಗೆ ಸುಖಾಂತ್ಯವಿದೆ.

ಅಲ್ಲಾಹು(ﷻ) ಹೇಳುತ್ತಾನೆ:

﴿وَالَّذِينَ جَاهَدُوا فِينَا لَنَهْدِيَنَّهُمْ سُبُلَنَا ۚ وَإِنَّ اللَّهَ لَمَعَ الْمُحْسِنِينَ ﴿٦٩﴾﴾

“ಯಾರು ನಮ್ಮ ಮಾರ್ಗದಲ್ಲಿ ಜಿಹಾದ್ ಮಾಡುತ್ತಾರೋ ಅವರನ್ನು ನಾವು ನಮ್ಮ ಮಾರ್ಗಗಳ ಕಡೆಗೆ ಸಾಗಿಸುವೆವು. ಖಂಡಿತವಾಗಿಯೂ ಅಲ್ಲಾಹು ಸತ್ಕರ್ಮಿಗಳೊಂದಿಗೇ ಇದ್ದಾನೆ.” (ಸೂರ ಅಲ್‌ಅನ್ಕಬೂತ್ 69)

ಆದ್ದರಿಂದ ಓ ಅಲ್ಲಾಹನ ದಾಸನೇ! ನಿನ್ನ ರಬ್ಬನ್ನು ಭಯಪಟ್ಟು ಜೀವಿಸುವುದು ಮತ್ತು ಅದರಲ್ಲಿ ಅಚಲವಾಗಿ ನಿಲ್ಲುವುದು ನಿನಗೆ ಸಂಬಂಧಿಸಿದಂತೆ ಅನಿವಾರ್ಯವಾಗಿದೆ. ನಿನಗೆ ಎಂತಹ ಪರೀಕ್ಷೆಗಳು ಎದುರಾದರೂ ಸರಿ. ನಿನಗೆ ಸಂಕಷ್ಟಗಳು ಒಂದರ ನಂತರ ಒಂದರಂತೆ ಎದುರಾದರೂ ಸರಿ. ಅಲ್ಲಾಹನ ಶತ್ರುಗಳು ನಿನ್ನನ್ನು ಹೀಯಾಳಿಸಿದರೂ ಸರಿ. ದುಷ್ಟರು ಮತ್ತು ಅಪರಾಧಿಗಳು ನಿನ್ನನ್ನು ಗೇಲಿ ಮಾಡಿದರೂ ಸರಿ. ನೀನು ಎದೆಗುಂದಬಾರದು. ಪ್ರವಾದಿಗಳ-ನ್ನು ಸ್ಮರಿಸಿ ನೋಡು. ಅವರ ಅನುಯಾಯಿಗಳನ್ನು ಸ್ಮರಿಸಿ ನೋಡು. ಅವರಿಗೆ ಹಿಂಸೆ ನೀಡಲಾಗಿದೆ. ಅವರನ್ನು ಹೀಯಾಳಿಸಲಾಗಿದೆ. ತಮಾಷೆ ಮಾಡಲಾಗಿದೆ. ಆದರೂ ಅವರು ಸಹನೆ ವಹಿಸಿದರು. ಆದ್ದರಿಂದ ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಅವರಿಗೆ ಸ್ತು-ತ್ಯರ್ಹವಾದ ಅಂತ್ಯವು ಲಭ್ಯವಾಯಿತು. ಆದ್ದರಿಂದ ಓ ಸಹೋದರ! ನೀನು ಕೂಡ ಅವರಂತೆಯೇ ಸಹನೆ ವಹಿಸು.

ತಕ್ವಾ ಎಂದರೇನು? ಇದರ ಬಗ್ಗೆ ಈಗಾಗಲೇ ಸ್ವಲ್ಪ ಹೇಳಲಾಗಿದೆ. ತಕ್ವಾದ ವಿಷಯದಲ್ಲಿ ವಿದ್ವಾಂಸರು ನೀಡಿದ ಅರ್ಥಗಳು ವಿಭಿನ್ನ-ವಾಗಿವೆ. ಅಮೀರುಲ್ ಮುಅ್‌ಮಿನೀನ್ ಉಮರ್ ಇಬ್ನ್ ಅಬ್ದುಲ್ ಅಝೀಝ್(ﷺ) ರಿಂದ ಹೀಗೆ ವರದಿಯಾಗಿದೆ.

لَيْسَ تَقْوَى اللَّهِ بِقِيَامِ اللَّيْلِ وَصِيَامِ النَّهَارِ وَالتَّخْلِيطِ فِيمَا بَيْنَ ذَلِكَ. وَلَكِنَّ التَّقْوَى أَدَاءُ فَرَائِضِ اللَّهِ وَتَرْكُ مَحَارِمِهِ. فَمَنْ رُزِقَ بَعْدَ ذَلِكَ خَيْرًا فَهُوَ خَيْرٌ إِلَى خَيْرٍ.

“ತಕ್ವಾ ಎಂದರೆ ರಾತ್ರಿ ನಮಾಝ್ ನಿರ್ವಹಿಸುವುದು, ಹಗಲಲ್ಲಿ

وِقَايَةً تَقِيكَ. ذَلِكَ بِفِعْلِ الْأَوَامِـرِ وَتَرْكِ النَّوَاهِي.

“ತಕ್ವಾ ಎಂದರೆ ನಿನ್ನ ಮತ್ತು ಅಲ್ಲಾಹನ ಕೋಪ ಹಾಗೂ ಶಿಕ್ಷೆಯ ಮಧ್ಯೆ ಅಲ್ಲಾಹನ ಆಜ್ಞೆಗಳನ್ನು ಪಾಲಿಸುವ ಮೂಲಕ ಮತ್ತು ಅವನ ವಿರೋಧಗಳನ್ನು ತೊರೆಯು ಮೂಲಕ ನಿನ್ನನ್ನು ರಕ್ಷಿಸುವಂತಹ ಒಂದು ರಕ್ಷಣಾಕವಚವನ್ನು ನಿರ್ಮಿಸುವುದು.”

ಈ ಎಲ್ಲಾ ಅರ್ಥಗಳೂ ಸರಿಯಾಗಿವೆ. ಒಟ್ಟಿನಲ್ಲಿ ತಕ್ವಾದ ನಿಜಸ್ವರೂಪ ಇಸ್ಲಾಮ್ ಧರ್ಮ. ಅಂದರೆ ವಿಶ್ವಾಸ ಮತ್ತು ಸತ್ಕರ್ಮ. ಅಂದರೆ ಪ್ರಯೋಜನಕಾರಿ ಜ್ಞಾನ ಮತ್ತು ಅದರ ಆಧಾರದಲ್ಲಿರುವ ಕರ್ಮ. ಅಂದರೆ ನೇರವಾದ ಮಾರ್ಗ. ಅಂದರೆ ಆಜ್ಞೆಗಳನ್ನು ಪಾಲಿಸುವ ಮೂಲಕ ಮತ್ತು ನಿಷೇಧಗಳನ್ನು ತ್ಯಜಿಸುವ ಮೂಲಕ ಪೂರ್ಣವಾದ ನಿಷ್ಕಳಂಕತೆಯೊಂದಿಗೆ ಅಲ್ಲಾಹನಿಗೆ, ಅವನಲ್ಲಿ ಮತ್ತು ಅವನ ರಸೂಲರಲ್ಲಿ ವಿಶ್ವಾಸವಿಟ್ಟು, ಅವನು ಮತ್ತು ಅವನ ರಸೂಲರು ತಿಳಿಸಿಕೊಟ್ಟ ಎಲ್ಲ ಕಾರ್ಯಗಳಲ್ಲೂ ಸತ್ಯಸಂಧವಾದ ವಿಶ್ವಾಸವಿಟ್ಟು, ಅವನು ವಿರೋಧಿಸಿದ ಕೆಡುಕುಗಳಿಂದ ದೂರ ಸರಿದು, ಅವನ ನಿಯಮಗಳನ್ನು ಉಲ್ಲಂಘಿಸದೆ ಅವನಿಗೆ ಸಂಪೂರ್ಣ ಶರಣಾಗುವುದು.

ಅಲ್ಲಾಹು ಅವನ ಧರ್ಮವನ್ನು ತಕ್ವಾ ಎಂದು ಕರೆದಿದ್ದಾನೆ. ಏಕೆಂದರೆ ಅದರಲ್ಲಿ ಅಚಲವಾಗಿ ನಿಲ್ಲುವವನನ್ನು ಅದು ಅಲ್ಲಾಹನ ಶಿಕ್ಷೆ ಮತ್ತು ಕ್ರೋಧದಿಂದ ರಕ್ಷಿಸುತ್ತದೆ. ಅವನ ಅಂತ್ಯವನ್ನು ಉತ್ತಮಪಡಿಸುತ್ತದೆ.

ಅಲ್ಲಾಹು ಅವನ ಧರ್ಮವನ್ನು ಇಸ್ಲಾಮ್ ಎಂದು ಕರೆದಿದ್ದಾನೆ. ಇಸ್ಲಾಮ್ ಎಂದರೆ ಶರಣಾಗತಿ. ಮುಸಲ್ಮಾನನು ತನ್ನ ದೇಹವನ್ನು ಅಲ್ಲಾಹನಿಗೆ ಶರಣಾಗಿಸುತ್ತಾನೆ. ಆದ್ದರಿಂದ ಅಲ್ಲಾಹು ಈ ಕೆಳಗಿನ ವಚನದಲ್ಲಿ ತನ್ನ ಧರ್ಮವನ್ನು ಇಸ್ಲಾಮ್ ಎಂದು ಕರೆದಿದ್ದಾನೆ.

﴿ إِنَّ ٱلدِّينَ عِندَ ٱللَّهِ ٱلْإِسْلَٰمُ ﴾

“ಖಂಡಿತವಾಗಿಯೂ ಅಲ್ಲಾಹನ ಬಳಿ ಸ್ವೀಕೃತವಾದ ಧರ್ಮ ಇಸ್ಲಾಮ್ ಮಾತ್ರ.” (ಸೂರ ಆಲು ಇಮ್ರಾನ್ 19)

ಕಾರಣ ಮುಸಲ್ಮಾನನು ಅಲ್ಲಾಹನ ಆಜ್ಞೆಗೆ ಶರಣಾಗುತ್ತಾನೆ ಮತ್ತು ಅವನ ಮಹಿಮೆಗೆ ತಲೆಬಾಗುತ್ತಾನೆ. ಮುಸಲ್ಮಾನನು ನಿಜವಾಗಿಯೂ ಅಲ್ಲಾಹನ ಆಜ್ಞೆಗೆ ಶರಣಾಗುತ್ತಾನೆ, ಅವನು ವಿರೋಧಿಸಿದ ಕಾರ್ಯಗಳಿಂದ ದೂರವಾಗುತ್ತಾನೆ ಮತ್ತು ಅಲ್ಲಾಹು ವಿಧಿಸಿದ ಗಡಿಗಳನ್ನು ದಾಟುವುದಿಲ್ಲ. ತನ್ನನ್ನು ನಿಯಂತ್ರಿಸುವ

ಉಪವಾಸ ಆಚರಿಸುವುದು ಮತ್ತು ಅವುಗಳ ನಡುವೆ ಬೆರೆಯುವುದಲ್ಲ. ತಕ್ವಾ ಎಂದರೆ ಅಲ್ಲಾಹು ಕಡ್ಡಾಯಗೊಳಿಸಿರುವುದನ್ನು ನಿರ್ವಹಿಸುವುದು ಮತ್ತು ನಿಷಿದ್ಧಗೊಳಿಸಿರುವುದನ್ನು ಬಿಟ್ಟು ಬಿಡುವುದು. ಇದರ ನಂತರವೂ ಯಾರಿಗಾದರೂ ಒಳಿತನ್ನು ಮಾಡುವ ಭಾಗ್ಯ ಸಿಕ್ಕಿದರೆ ಅವರು ಒಳಿತಿನ ಮೇಲಿರುವ ಒಳಿತಾಗಿದೆ.”

ಅಂದರೆ ಅಲ್ಲಾಹು ಕಡ್ಡಾಯಗೊಳಿಸಿರುವುದನ್ನು ನಿರ್ವಹಿಸಿ ಅವನು ನಿಷಿದ್ಧಗೊಳಿಸಿರುವುದನ್ನು ಬಿಟ್ಟುಬಿಟ್ಟ ಬಳಿಕವೂ ಯಾರಿಗಾದರೂ ಐಚ್ಛಿಕ ಕರ್ಮಗಳನ್ನು ನಿರ್ವಹಿಸುವ ಮತ್ತು ಕರಾಹತ್ ಆಗಿರುವ ಸಂಶಯವಿರುವ ವಿಷಯಗಳನ್ನು ಬಿಟ್ಟುಬಿಡುವ ಭಾಗ್ಯ ಸಿಕ್ಕಿದರೆ ಅದು ಒಳಿತಿನ ಮೇಲಿರುವ ಒಳಿತಾಗಿದೆ.

ಪ್ರಸಿದ್ಧ ತಾಬಿಈವರ್ಯರಾದ ತಲ್ಕ್ ಇಬ್ನ್ ಹಬೀಬ್(ﷺ) ಹೇಳುತ್ತಾರೆ.

تَقْـوَى اللَّهِ أَنْ تَعْمَلَ بِطَاعَةِ اللَّـهِ عَلَى نُورٍ مِنَ اللَّهِ تَرْجُو ثَوَابَ اللَّهِ، وَأَنْ تَـدَعَ مَعَاصِيَ اللَّهِ عَلَى نُورٍ مِنَ اللَّهِ تَخَـافُ عِقَابَ اللَّهِ.

“ಅಲ್ಲಾಹನನ್ನು ಭಯಪಡುವುದು (ತಕ್ವಾ) ಎಂದರೆ ಅಲ್ಲಾಹನಿಂದ ಪ್ರತಿಫಲವನ್ನು ಆಶಿಸುತ್ತಾ, ಅಲ್ಲಾಹು ನೀಡಿದ ಬೆಳಕಿನ ಆಧಾರದಲ್ಲಿ (ಕುರ್‌ಆನ್ ಮತ್ತು ಸುನ್ನತ್ತಿನ ಆಧಾರದಲ್ಲಿ) ಅಲ್ಲಾಹನ ಆಜ್ಞಾನುಸರಣೆಯ ಕರ್ಮಗಳನ್ನು ಮಾಡುವುದು ಮತ್ತು ಅಲ್ಲಾಹನ ಶಿಕ್ಷೆಯನ್ನು ಭಯಪಡುತ್ತಾ, ಅಲ್ಲಾಹು ನೀಡಿದ ಬೆಳಕಿನ ಆಧಾರದಲ್ಲಿ ಅಲ್ಲಾಹನ ಆಜ್ಞೋಲ್ಲಂಘನೆಯ ಕಾರ್ಯಗಳನ್ನು ಬಿಟ್ಟುಬಿಡುವುದು.”

ಕೆಲವರು ಇದನ್ನು (ತಕ್ವಾ) ವ್ಯಾಖ್ಯಾನಿಸುತ್ತಾ ಹೀಗೆ ಹೇಳುತ್ತಾರೆ.

التَّقْوَى طَاعَةُ اللَّهِ وَرَسُولِهِ.

“ತಕ್ವಾ ಎಂದರೆ ಅಲ್ಲಾಹು ಮತ್ತು ಅವನ ರಸೂಲರನ್ನು ಅನುಸರಿಸುವುದು.”

ಇತರರು ಹೇಳುತ್ತಾರೆ.

التَّقْوَى أَنْ تَجْعَلَ بَيْنَكَ وَبَيْـنَ غَضَبِ اللَّهِ وَعِقَابِهِ

ಅಧಿಕಾರವನ್ನು ಅವನು ಅಲ್ಲಾಹನಿಗೆ ನೀಡುತ್ತಾನೆ. ಅಲ್ಲಾಹು ಹೇಳಿದಂತೆ ಕೇಳುತ್ತಾನೆ. ಅವನ ತೃಪ್ತಿ, ಸಂತಸ, ಪ್ರೀತಿ, ಅನುಗ್ರಹಗಳೆಲ್ಲವೂ ಅಲ್ಲಾಹನ ಆಜ್ಞೆಗಳನ್ನು ಅನುಸರಿಸುವುದರಲ್ಲಿ ಮತ್ತು ಅವನ ವಿರೋಧಗಳಿಂದ ದೂರ ಸರಿಯುವುದರಲ್ಲಾಗಿದೆ. ಇವನೇ ನಿಜವಾದ ಮುಸ್ಲಿಮ್.

ಈ ಕಾರಣದಿಂದಲೇ ಇಸ್ಲಾಮ್ ಧರ್ಮದ ಅನುಯಾಯಿಯನ್ನು ಮುಸ್ಲಿಮ್ ಎಂದು ಕರೆಯಲಾಗುತ್ತದೆ. ಅಂದರೆ ಅಲ್ಲಾಹನ ಆಜ್ಞೆಗೆ ಶರಣಾದವನು, ಅಲ್ಲಾಹು ನಿಷೇಧಿಸಿದ್ದನ್ನು ತ್ಯಜಿಸುವವನು ಮತ್ತು ಅಲ್ಲಾಹು ವಿಧಿಸಿದ ಗಡಿಗಳನ್ನು ದಾಟದವನು ಎಂದರ್ಥ.

ಅಲ್ಲಾಹು ತನ್ನ ಧರ್ಮವನ್ನು ಇಸ್ಲಾಮ್ ಎಂದು ಕರೆದಂತೆಯೇ ಇಬಾದತ್ ಎಂದು ಕೂಡ ಕರೆದಿದ್ದಾನೆ. ಅಲ್ಲಾಹನ(ﷻ) ಈ ಕೆಳಗಿನ ವಚನದಲ್ಲಿ ಇಸ್ಲಾಮ್ ಧರ್ಮವನ್ನು ಇಬಾದತ್ ಎಂದು ಕರೆಯಲಾಗಿದೆ.

﴿ يَٰٓأَيُّهَا ٱلنَّاسُ ٱعۡبُدُواْ رَبَّكُمُ ﴾

"ಓ ಜನರೇ! ನೀವು ನಿಮ್ಮ ರಬ್ಬಿನ ಇಬಾದತ್ ಮಾಡಿರಿ." (ಸೂರ ಅಲ್‌ಬಕರ 21)

ಅಲ್ಲಾಹು(ﷻ) ಹೇಳುತ್ತಾನೆ:

﴿ وَمَا خَلَقۡتُ ٱلۡجِنَّ وَٱلۡإِنسَ إِلَّا لِيَعۡبُدُونِ ٥٦ ﴾

"ನನ್ನ ಇಬಾದತ್ ಮಾಡುವುದಕ್ಕಾಗಿಯಲ್ಲದೆ ನಾನು ಜಿನ್ನ್ ಮತ್ತು ಮನುಷ್ಯರನ್ನು ಸೃಷ್ಟಿಸಿಲ್ಲ." (ಸೂರ ಅದ್ದಾರಿಯಾತ್ 56)

ಅವನು ಧರ್ಮವನ್ನು ಇಬಾದತ್ ಎಂದು ಕರೆದಿರುವುದು ಏಕೆಂದರೆ ದಾಸರು ಅವನ ಆಜ್ಞೆಗಳನ್ನು ಅನುಸರಿಸುತ್ತಾರೆ ಮತ್ತು ವಿರೋಧಗಳನ್ನು ತ್ಯಜಿಸುತ್ತಾರೆ. ಅವರು ಹೀಗೆ ಮಾಡುವುದು ವಿಧೇಯತೆ, ಸಮರ್ಪಣೆ ಮತ್ತು ತಮ್ಮ ದಾಸ್ಯತ್ವವನ್ನು ಒಪ್ಪಿಕೊಂಡಾಗಿದೆ. ತಾವು ಅಲ್ಲಾಹನ ದಾಸರು ಮತ್ತು ಅಲ್ಲಾಹು ತಮ್ಮ ಒಡೆಯ ಎಂಬ ಅರಿವಿನಿಂದಾಗಿದೆ. ಅವನು ತಮ್ಮ ಮೇಲಿರುವ ಸರ್ವಾಧಿಕಾರಿ. ಅವನು ತಮ್ಮ ಸ್ಥಿತಿಗತಿಗಳನ್ನು ಅರಿತಿದ್ದಾನೆ. ಅವನು ತಮ್ಮ ಕಾರ್ಯಗಳನ್ನು ನಿಯಂತ್ರಿಸುತ್ತಾನೆ. ಆದ್ದರಿಂದ ನಾವು ಅವನ ದಾಸರು, ಆಜ್ಞಾಪಾಲನೆ ಮಾಡಬೇಕಾದವರು, ಶರಣಾಗಬೇಕಾದವರು ಎಂದು ಅವರು ಅರಿತಿದ್ದಾರೆ. ಈ ಕಾರಣದಿಂದಲೇ ಅವನು ಧರ್ಮವನ್ನು ಇಬಾದತ್ ಎಂದು ಕರೆದಿದ್ದಾನೆ.

ಅರಬ್ಬಿಗಳ ಪ್ರಕಾರ ಇಬಾದತ್ ಎಂದರೆ ವಿಧೇಯತೆ ಮತ್ತು ಸಮರ್ಪಣೆ. ತುಳಿದು ತುಳಿದು ವಿಧೇಯಗೊಳಿಸಲಾದ ಹಾದಿಯನ್ನು ಅವರು ತರೀಕ್ ಮುಅಬ್ಬದ್ ಎನ್ನುತ್ತಾರೆ. ಅದೇ ರೀತಿ ಸವಾರಿ ಮಾಡಿ ಮಾಡಿ ಮತ್ತು ಸಾಮಾನು ಹೊತ್ತು ಹೊತ್ತು ಸವಾರಿಗೆ ಮತ್ತು ಸಾಮಾನು ಹೊರಲು ವಿಧೇಯಗೊಳಿಸಲಾದ ಒಂಟೆಯನ್ನು ಅವರು ಬಈರ್ ಮುಅಬ್ಬದ್ ಎನ್ನುತ್ತಾರೆ. ಇದೇ ಅರ್ಥದಲ್ಲಿ ನಾವು ಅಲ್ಲಾಹನಿಗೆ ಮಾಡುವ ಅನುಸರಣೆಯನ್ನು ಇಬಾದತ್ ಎಂದು ಕರೆಯಲಾಗಿದೆ. ಏಕೆಂದರೆ ನಾವು ಅದನ್ನು ವಿಧೇಯತೆಯಿಂದ ಸಮರ್ಪಣಾಭಾವದಿಂದ ನಿರ್ವಹಿಸುತ್ತೇವೆ. ದಾಸನನ್ನು ದಾಸ ಎಂದು ಕರೆಯಲಾಗಿರುವುದು ಇದೇ ಅರ್ಥದಲ್ಲಿ. ಏಕೆಂದರೆ ಅವನು ಅಲ್ಲಾಹನ ಮುಂದೆ ವಿಧೇಯನಾಗಿರುತ್ತಾನೆ, ಅವನ ಆಜ್ಞೆಗೆ ಶರಣಾಗುತ್ತಾನೆ. ಅಲ್ಲಾಹು ಅವನ ವಿಷಯದಲ್ಲಿ ಅವನಿಚ್ಛಿಸಿದಂತೆ ಹಸ್ತಕ್ಷೇಪ ಮಾಡುತ್ತಾನೆ.

ಅಲ್ಲಾಹು ತನ್ನ ಧರ್ಮವನ್ನು ಈಮಾನ್ ಎಂದು ಕೂಡ ಕರೆದಿದ್ದಾನೆ. ಕಾರಣ ದಾಸರು ಈ ಧರ್ಮವನ್ನು ಅನುಸರಿಸುವುದು ಅಲ್ಲಾಹನಲ್ಲಿರುವ ಮತ್ತು ಅವನ ಪ್ರವಾದಿಗಳಲ್ಲಿರುವ ವಿಶ್ವಾಸದಿಂದ. ಈ ಕಾರಣದಿಂದಲೇ ಅಲ್ಲಾಹನ ಧರ್ಮವನ್ನು ಈಮಾನ್ ಎಂದು ಕರೆಯಲಾಗಿದೆ. ಸಹೀಹಾದ ಹದೀಸಿನಲ್ಲಿ ಬಂದಿರುವ ಪ್ರವಾದಿ (ﷺ) ಯವರು ಹೇಳುತ್ತಾರೆ.

«الْإِيمَانُ بِضْعٌ وَسَبْعُونَ شُعْبَةً. فَأَفْضَلُهَا قَوْلُ لَا إِلَهَ إِلَّا اللَّهُ. وَأَدْنَاهَا إِمَاطَةُ الْأَذَى عَنِ الطَّرِيقِ. وَالْحَيَاءُ شُعْبَةٌ مِنَ الْإِيمَانِ».

"ಈಮಾನಿಗೆ ಎಪ್ಪತ್ತಕ್ಕಿಂತಲೂ ಹೆಚ್ಚು ಶಾಖೆಗಳಿವೆ. ಅದರಲ್ಲಿ ಅತಿಶ್ರೇಷ್ಠವಾದುದು ಲಾ ಇಲಾಹ ಇಲ್ಲಲ್ಲಾಹ್ ಎಂಬ ವಚನ. ಅತಿ ಕೆಳಗಿನ ಸ್ಥಾನದಲ್ಲಿರುವುದು ದಾರಿಯಿಂದ ಅಡೆತಡೆಗಳನ್ನು ನಿವಾರಿಸುವ ಕಾರ್ಯ. ನಾಚಿಕೆ ಕೂಡ ಈಮಾನಿನ ಒಂದು ಶಾಖೆಯಾಗಿದೆ." (ಅಲ್‌ಬುಖಾರಿ ಮತ್ತು ಮುಸ್ಲಿಂ. ಇದು ಮುಸ್ಲಿಮ್‌ರ ವರದಿ.)

ಧರ್ಮವು ಸಂಪೂರ್ಣವಾಗಿ ಈಮಾನ್ ಆಗಿದೆಯೆಂದು ಪ್ರವಾದಿಯವರು(ﷺ) ಇಲ್ಲಿ ವಿವರಿಸುತ್ತಾರೆ. ಅದರ ಅತ್ಯುನ್ನತ ಶಾಖೆ ಲಾ ಇಲಾಹ ಇಲ್ಲಲ್ಲಾಹ್ ಎಂಬ ವಚನ. ಅಲ್ಲಾಹನ ಬಳಿ ಧರ್ಮವು ಸಂಪೂರ್ಣವಾಗಿ ಈಮಾನ್ ಆಗಿದೆಯೆಂದು

ಇದರಿಂದ ತಿಳಿದುಕೊಳ್ಳಬಹುದು. ಈ ಕಾರಣದಿಂದಲೇ ಅಲ್ಲಾಹು (ﷻ) ಹೇಳುತ್ತಾನೆ:

﴿وَعَدَ ٱللَّهُ ٱلْمُؤْمِنِينَ وَٱلْمُؤْمِنَٰتِ جَنَّٰتٍ تَجْرِى مِن تَحْتِهَا ٱلْأَنْهَٰرُ﴾

"ಅಲ್ಲಾಹು ವಿಶ್ವಾಸಿಗಳಿಗೆ ಮತ್ತು ವಿಶ್ವಾಸಿನಿಯರಿಗೆ ತಳಭಾಗದಲ್ಲಿ ಹೊಳೆಗಳು ಹರಿಯುವ ಸ್ವರ್ಗೋದ್ಯಾನಗಳನ್ನು ವಾಗ್ದಾನ ಮಾಡಿದ್ದಾನೆ." (ಸೂರ ಅತ್ತೌಬ 72)

ಅಲ್ಲಾಹು ಅವರನ್ನು ವಿಶ್ವಾಸಿಗಳು ಮತ್ತು ವಿಶ್ವಾಸಿನಿಗಳೆಂದು ಕರೆದಿದ್ದಾನೆ. ಏಕೆಂದರೆ ಅಲ್ಲಾಹನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಟ್ಟಿರುವ ನೀನು ಸತ್ಕರ್ಮಗಳನ್ನು ನಿರ್ವಹಿಸುವುದು ಮತ್ತು ದುಷ್ಕರ್ಮಗಳನ್ನು ತೊರೆಯುವುದು ಅಲ್ಲಾಹು ನಿನಗೆ ಅದನ್ನು ಆಜ್ಞಾಪಿಸಿದ್ದಾನೆ ಮತ್ತು ವಿರೋಧಿಸಿದ್ದಾನೆ ಎಂಬ ವಿಶ್ವಾಸದಿಂದ. ಅವನು ನಿನ್ನ ಈ ಕೆಲಸವನ್ನು ಇಷ್ಟಪಡುತ್ತಾನೆ ಮತ್ತು ಅದಕ್ಕೆ ಪ್ರತಿಫಲ ನೀಡುತ್ತಾನೆ ಎಂಬ ವಿಶ್ವಾಸದಿಂದ. ಅವನು ನಿನ್ನ ಒಡೆಯ ಮತ್ತು ನಿನ್ನ ಬಗ್ಗೆ ಅವನು ನಿರ್ಲಕ್ಷ್ಯನಲ್ಲ ಎಂಬ ವಿಶ್ವಾಸದಿಂದ. ಈ ಕಾರಣದಿಂದಲೇ ನೀನು ಸತ್ಕರ್ಮಗಳನ್ನು ನಿರ್ವಹಿಸುತ್ತೀ, ಕಡ್ಡಾಯಗಳನ್ನು ಸಂದಾಯ ಮಾಡುತ್ತೀ, ನಿಷಿದ್ಧಗಳನ್ನು ವರ್ಜಿಸುತ್ತೀ, ನಿಯಮಗಳನ್ನು ಪಾಲಿಸುತ್ತೀ ಮತ್ತು ನಿನ್ನ ಶರೀರದ ವಿರುದ್ಧ ಜಿಹಾದ್ ಮಾಡುತ್ತೀ.

ಅಲ್ಲಾಹು ಅವನ ಧರ್ಮವನ್ನು ಒಳಿತು ಎಂದು ಕರೆದಿದ್ದಾನೆ. ಏಕೆಂದರೆ ಈ ಧರ್ಮದಲ್ಲಿರುವುದೆಲ್ಲವೂ ಒಳಿತಾಗಿದೆ. ಅದೇ ರೀತಿ ಈ ಧರ್ಮವನ್ನು ಮಾರ್ಗದರ್ಶನ ಎಂದು ಕರೆದಿದ್ದಾನೆ. ಕಾರಣ ಯಾರು ಈ ಧರ್ಮದಲ್ಲಿ ಅಚಲವಾಗಿ ನಿಲ್ಲುತ್ತಾರೋ ಅವರು ಅತ್ಯುತ್ತಮ ಸ್ವಭಾವ ಮತ್ತು ಅತ್ಯತ್ತಮ ಕರ್ಮಗಳ ಕಡೆಗೆ ಮಾರ್ಗದರ್ಶನ ಪಡೆಯುತ್ತಾರೆ. ಅಲ್ಲಾಹು ಅವನ ಪ್ರವಾದಿ(ﷺ) ಯನ್ನು ಕಳುಹಿಸಿರುವುದು ಉತ್ತಮ ಗುಣಸ್ವಭಾವಗಳನ್ನು ಮತ್ತು ಅತ್ಯುತ್ತಮ ಕರ್ಮಗಳನ್ನು ಪೂರ್ಣವಾಗಿ ತೋರಿಸಿಕೊಡುವುದಕ್ಕಾಗಿ. ಪ್ರವಾದಿ (ﷺ) ರವರು ಹೇಳುತ್ತಾರೆ.

«إِنَّمَا بُعِثْتُ لِأُتَمِّمَ مَكَارِمَ الْأَخْلَاقِ».

"ನನ್ನನ್ನು ಕಳುಹಿಸಲಾಗಿರುವುದು ಅತ್ಯುತ್ತಮ ಗುಣಸ್ವಭಾವಗಳನ್ನು ಪೂರ್ತಿಯಾಗಿ ತೋರಿಸಿಕೊಡಲು."

ಅಬೂ ಝರ್(ؓ) ರವರ ಸಹೋದರ ಉನೈಸ್(ؓ) ರವರ ಹದೀಸಿನಲ್ಲಿ ಹೀಗಿದೆ.

سَمِعْتُ رَسُولَ اللَّهِ صَلَّى اللَّهُ عَلَيْهِ وَسَلَّمَ يَدْعُو إِلَى مَكَارِمِ الْأَخْلَاقِ.

"ಪ್ರವಾದಿ(ﷺ) ಯವರು ಅತ್ಯುತ್ತಮ ಗುಣಸ್ವಭಾವದ ಕಡೆಗೆ ಆಮಂತ್ರಿಸುವುದನ್ನು ನಾನು ಕೇಳಿದ್ದೇನೆ."

ಅಲ್ಲಾಹು ಅವನ ಧರ್ಮವನ್ನು ಮಾರ್ಗದರ್ಶನ ಎಂದು ಕರೆದಿರುವುದು ಏಕೆಂದರೆ ಇದರಲ್ಲಿ ಅಚಲವಾಗಿ ನಿಲ್ಲುವವರನ್ನು ಇದು ಅತ್ಯುತ್ತಮ ಗುಣಸ್ವಭಾವಗಳ ಕಡೆಗೆ ಮಾರ್ಗದರ್ಶನ ನೀಡುತ್ತದೆ.

ಅಲ್ಲಾಹು(ﷻ) ಹೇಳುತ್ತಾನೆ:

﴿وَلَقَدْ جَآءَهُم مِّن رَّبِّهِمُ ٱلْهُدَىٰٓ ﴿٢٣﴾﴾

"ಅವರಿಗೆ ಅವರ ರಬ್ಬಿನ ಕಡೆಯಿಂದ ಮಾರ್ಗದರ್ಶನವು ಬಂದಿದೆ." (ಸೂರ ಅನ್ನಜ್ಮ್ 23)

ಮಾರ್ಗದರ್ಶನ ಪಡೆದವರ ಬಗ್ಗೆ ಅವನು ಹೇಳುತ್ತಾನೆ:

﴿أُوْلَٰٓئِكَ عَلَىٰ هُدًى مِّن رَّبِّهِمْ﴾

"ಅವರು ಅವರ ರಬ್ಬಿನ ಕಡೆಯ ಮಾರ್ಗದರ್ಶನದಲ್ಲಿದ್ದಾರೆ." (ಸೂರ ಅಲ್‌ಬಕರ 5)

﴿وَأُوْلَٰٓئِكَ هُمُ ٱلْمُهْتَدُونَ ﴿١٥٧﴾﴾

"ಅವರೇ ಸನ್ಮಾರ್ಗದಲ್ಲಿರುವವರು." (ಸೂರ ಅಲ್‌ಬಕರ 157)

ಓ ಸಹೋದರ! ಇದರಿಂದ ನಿನಗೆ ಇಸ್ಲಾಮ್, ಈಮಾನ್, ತಕ್ವಾ, ಹುದಾ, ಬಿರ್, ಇಬಾದತ್ ಇತ್ಯಾದಿಗಳ ಅರ್ಥವನ್ನು ತಿಳಿದುಕೊಳ್ಳಬಹುದು. ಈ ಇಸ್ಲಾಮ್ ಧರ್ಮವು ಎಲ್ಲ ಒಳಿತುಗಳನ್ನೂ ಒಳಗೊಂಡಿದೆಯೆಂದು ನಿನಗೆ ತಿಳಿದುಕೊಳ್ಳಬಹುದು. ಯಾರು ಈ ಧರ್ಮದಲ್ಲಿ

*33 ನೇ ಪುಟಕ್ಕೆ*

# ಪ್ರವಾದಿ ಮುಹಮ್ಮದ್(ﷺ)—ಮಾನವತೆಯ ಸಂಪೂರ್ಣ ಮಾದರಿ

ಪ್ರವಾದಿ(ﷺ) ಯವರು ಮನುಷ್ಯರೊಂದಿಗೆ ಮಾತ್ರವಲ್ಲ, ಇತರ ಜೀವಜಾಲಗಳೊಂದಿಗೂ ಪ್ರೀತಿ ಮತ್ತು ಕರುಣೆಯನ್ನು ತೋರಿಸುತ್ತಿದ್ದರಲ್ಲದೆ, ತಮ್ಮ ಅನುಯಾಯಿಗಳಿಗೂ ಅದನ್ನು ಆದೇಶಿಸುತ್ತಿದ್ದರು. ಅನ್ಯಾಯವಾಗಿ ಒಂದು ಇರುವೆಯನ್ನು ಕೂಡ ನೋಯಿಸದ ಪ್ರವಾದಿ(ﷺ) ಹಸಿ ಕರುಳಿನ ಪ್ರತಿಯೊಂದರ ಮೇಲೂ ಕರುಣೆಯಿಂದ ವರ್ತಿಸಬೇಕೆಂದು ಲೋಕಕ್ಕೆ ಉಪದೇಶಿಸಿದರು. ಪ್ರಾಣಿಗಳನ್ನು ದಿಬ್ಬ ಮಾಡುವ ಸಂದರ್ಭದಲ್ಲಿ ಕತ್ತಿಯನ್ನು ಹರಿತಗೊಳಿಸುವ ಮೂಲಕ ಅದಕ್ಕಾಗುವ ನೋವನ್ನು ಕಡಿಮೆ ಮಾಡಬೇಕೆಂದು ಸೂಚಿಸಿರುವುದು ಅವರಿಗೆ ಜೀವಿಗಳ ಮೇಲಿದ್ದ ಕರುಣೆಗೆ ನಿದರ್ಶನವಾಗಿದೆ.

ಮಾದರಿಯಾಗುವುದು ಬಹಳ ಕಷ್ಟದ ಕೆಲಸ. ಜಾಗತಿಕ ಇತಿಹಾಸದಲ್ಲಿ ಜನರಿಗೆ ಕೆಲವು ಕಾರ್ಯಗಳಲ್ಲಿ ಮಾದರಿಯಾದವರು ಹಲವರಿದ್ದಾರೆ. ಆದರೆ, ಆಡಳಿತ ಕ್ಷೇತ್ರದಲ್ಲಿ ಮಾದರಿಯಾದವರು ಕುಟುಂಬ ರಂಗದಲ್ಲಿ ವಿಫಲರಾದರು. ರಾಜಕೀಯದಲ್ಲಿ ಮಿನುಗಿದವರು ಆರ್ಥಿಕ ಕ್ಷೇತ್ರದಲ್ಲಿ ಕಳಂಕ ಹೊತ್ತುಕೊಂಡರು. ಭೌತಿಕ ವಲಯದಲ್ಲಿ ಮೇರು ಸಾಧನೆಗಳನ್ನು ಮಾಡಿದವರು ಆಧ್ಯಾತ್ಮಿಕತೆಯಲ್ಲಿ ಕುಸಿದು ಬಿದ್ದರು. ಆದರೆ ಮಾನವ ಇತಿಹಾಸದಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಮಾದರಿಯಾದ ಏಕೈಕ ವ್ಯಕ್ತಿ ಇದ್ದರೆ ಅದು ಪ್ರವಾದಿ ಮುಹಮ್ಮದ್(ﷺ) ಅವರಾಗಿದ್ದಾರೆಂದು ಕಾಮಾಲೆ ಕಣ್ಣಿನಿಂದ ಚರಿತ್ರೆಯನ್ನು ಅಧ್ಯಯನ ಮಾಡದ ಪ್ರತಿಯೊಬ್ಬರಿಗೂ ಸ್ಪಷ್ಟವಾಗುವ ಕಾರ್ಯವಾಗಿದೆ. ಆದುದರಿಂದಲೇ ಅಲ್ಲಾಹನು ಹೇಳುತ್ತಾನೆ.

﴿ لَّقَدْ كَانَ لَكُمْ فِي رَسُولِ ٱللَّهِ أُسْوَةٌ حَسَنَةٌ لِّمَن
كَانَ يَرْجُوا۟ ٱللَّهَ وَٱلْيَوْمَ ٱلْـَٔاخِرَ وَذَكَرَ ٱللَّهَ كَثِيرًا ﴿٢١﴾ ﴾

“ನಿಶ್ಚಯವಾಗಿಯೂ ಅಲ್ಲಾಹನ ಸಂದೇಶವಾಹಕರಲ್ಲಿ ನಿಮಗೆ ಒಂದು ಅತ್ಯುತ್ತಮ ಮಾದರಿ ಇದೆ. (ಅದು) ಅಲ್ಲಾಹ್ ಹಾಗೂ ಅಂತಿಮ ದಿನವನ್ನು ನಿರೀಕ್ಷಿಸುವವನಿಗೆ ಮತ್ತು ಅಲ್ಲಾಹನನ್ನು ಬಹಳವಾಗಿ ಸ್ಮರಿಸುವವನಿಗೆ.” (33:21)

ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಪ್ರವಾದಿ(ﷺ) ಯವರಿಂದ ನಮಗೆ ಮಾದರಿ ಇದೆ. ಕೆಲವು ಉದಾಹರಣೆಗಳನ್ನು ನೋಡಿರಿ.

**ಪತಿ:**

ಒಬ್ಬನ ಸ್ವಭಾವ, ವರ್ತನೆಯ ರೀತಿಗಳಿಗೆ ಸರ್ಟಿಫಿಕೇಟ್ ನೀಡಲು ಅತಿಹೆಚ್ಚು ಅರ್ಹರಾಗಿರುವವರು ಪತ್ನಿಯರಾಗಿದ್ದಾರೆ. ಪ್ರವಾದಿ(ﷺ) ಯವರ ಸ್ವಭಾವದ ಕುರಿತು ಪತ್ನಿ ಆಯಿಶಾ(ರ) ರಲ್ಲಿ ವಿಚಾರಿಸಿದಾಗ ಅವರು ನೀಡಿದ ಉತ್ತರ, “ಪ್ರವಾದಿ(ﷺ) ಯವರ ಸ್ವಭಾವ ಕುರ್‌ಆನ್ ಆಗಿತ್ತು.” ಎಂದಾಗಿದೆ. ಪ್ರವಾದಿ(ﷺ) ಯವರು ಕುರ್‌ಆನ್ ಪ್ರತಿಪಾದಿಸಿದ ಜೀವನ ನಡೆಸಿದರು ಎಂದರ್ಥ. ನಾವು ಜೀವನದ ವಿವಿಧ ಕ್ಷೇತ್ರಗಳಲ್ಲಿ ಮಿಂಚುತ್ತಿರುವಾಗ ಮತ್ತು ನಾವು ವ್ಯವಹರಿಸುತ್ತಿರುವವರ ನಡುವೆ ಉತ್ತಮ ವ್ಯಕ್ತಿಯೆಂದು ಕರೆಸಿಕೊಳ್ಳುತ್ತಿರುವಾಗ ನಮ್ಮ ಕುರಿತು ಸ್ವಂತ ಪತ್ನಿಗೆ ಹೀಗೆಯೇ ನಲ್ನುಡಿಯನ್ನು ಹೇಳಲು ಸಾಧ್ಯವಿದೆಯೇ ಎಂದು ಯೋಚಿಸಬೇಕಾಗಿದೆ.

**ತಂದೆ:**

ಹಲವು ದಿನಗಳ ಕಾಲ ಹಸಿವೆಯಿಂದ ಕಂಗೆಟ್ಟ ನಂತರ ಸಿಕ್ಕಿದ

ಆಹಾರ ಸೇವಿಸುವಾಗಲೂ ಅವರು ತಮ್ಮ ಪ್ರೀತಿಪಾತ್ರ ಪುತ್ರಿಯನ್ನು ಮರೆಯಲಿಲ್ಲ. ತನಗೆ ಒಬ್ಬ ಸೇವಕಿಯ ಅಗತ್ಯವಿದೆಯೆಂದು ಹೇಳಿದ ಮಗಳೊಂದಿಗೆ ಅವರು ಅದಕ್ಕಿಂತ ಪ್ರಮುಖವಾದ ಹಾಗೂ ಪರಲೋಕದಲ್ಲಿ ಉಪಕಾರಿಯಾದ ಕೆಲವು ಕಾರ್ಯಗಳನ್ನು (ನಿದ್ರಿಸುವ ಸಮಯ ಸುಬ್‌ಹಾನಲ್ಲಾ, ಅಲ್‌ಹಂದುಲಿಲ್ಲಾ 33 ಬಾರಿ ಮತ್ತು ಅಲ್ಲಾಹು ಅಕ್ಬರ್ 34 ಬಾರಿ) ಹೇಳಿಕೊಡುವ ಮೂಲಕ ಮಗಳಿಗೆ ಪರಲೋಕ ಮೋಕ್ಷದ ಕಾರ್ಯವನ್ನು ನೆನಪಿಸಿಕೊಟ್ಟರು.

ಪುತ್ರಿ ಫಾತಿಮಾ(ﷺ) ರೊಂದಿಗೆ ಜಗಳವಾಡಿದ ಅಳಿಯ ಅಲಿಯ್ಯ್ (ﷺ) ಅವರ ಸಮೀಪ ತೆರಳಿ ಸಮಾಧಾನಪಡಿಸಿದ ಪ್ರವಾದಿ(ﷺ) ಯವರು ಅವರನ್ನು ಮನೆಗೆ ಕರೆದುಕೊಂಡು ಹೋಗುವ ಮೂಲಕ ಓರ್ವ ತಂದೆಯ ಬಾಧ್ಯತೆಯನ್ನು ನಿರ್ವಹಿಸಿದರು. ಓರ್ವ ಉತ್ತಮ ತಂದೆ ಹೇಗಿರಬೇಕೆಂದು ಪ್ರವಾದಿ(ﷺ) ಯವರು ತಮ್ಮ ಜೀವನದ ಮೂಲಕ ನಮಗೆ ತೋರಿಸಿಕೊಟ್ಟಿದ್ದಾರೆ.

## ಪಿತಾಮಹ:

ಪ್ರವಾದಿ(ﷺ) ಯವರು ತಮ್ಮ ಮೊಮ್ಮಕ್ಕಳಾದ ಹಸನ್(ﷺ), ಹುಸೈನ್ (ﷺ) ರವರ ಧಾರ್ಮಿಕ ಕಾರ್ಯಗಳಲ್ಲಿ ಬಹಳ ಗಮನಹರಿಸುತ್ತಿದ್ದ ಪಿತಾಮಹರಾಗಿದ್ದರು. ಅವರನ್ನು ಪ್ರೀತಿಸುವ, ಲಾಲಿಸುವ, ಅವರ ಜೊತೆ ಸೇರಿಕೊಂಡು ಮಗುವಾಗಿ ಆಡುವ, ಮಸೀದಿಯ ಮಿಂಬರ್‌ನಿಂದ ಇಳಿದು ಬಂದು ಕೂಡ ಅವರನ್ನು ಚುಂಬಿಸುತ್ತಿದ್ದ ತಾತ. ಒಮ್ಮೆ ಮೊಮ್ಮಕ್ಕಳಲ್ಲಿ ಒಬ್ಬ ಸಾರ್ವಜನಿಕ ಬೊಕ್ಕಸಕ್ಕೆ ಸೇರಿದ ಒಂದು ಖರ್ಜೂರವನ್ನು ಬಾಯಿಗೆ ಹಾಕಿದಾಗ ಬಾಯಿಗೆ ಕೈ ಹಾಕಿ ಅದನ್ನು ಹೊರತೆಗೆಯುವ ಮೂಲಕ ಅವರ ಹೊಟ್ಟೆಯಲ್ಲಿ ಹರಾಮ್ ಬೆರೆಯುವುದನ್ನು ತಡೆದ ಪ್ರೀತಿಯ ಪಿತಾಮಹ. ಮೊಮ್ಮಕ್ಕಳಿಗೆ ಎಲ್ಲಾ ವಿಧದ ಉಪದ್ರವಗಳಿಂದ ರಕ್ಷಣೆ ಸಿಗಲು ಪ್ರವಾದಿ(ﷺ) ಯವರು ಅವರ ತಲೆಯ ಮೇಲೆ ಕೈಯಿಟ್ಟು ಪ್ರಾರ್ಥಿಸುತ್ತಿದ್ದರು.

## ನಾಯಕ:

ಇತಿಹಾಸದಲ್ಲಿ ತಮ್ಮ ಅನುಚರರನ್ನು ಇಷ್ಟು ಅತ್ಯಧಿಕವಾಗಿ ಪ್ರೀತಿಸಿದ ಮತ್ತೋರ್ವ ನಾಯಕ ಗತಿಸಿಹೋಗಿಲ್ಲ. ಪ್ರವಾದಿ(ﷺ) ಯವರಲ್ಲಿ ನಾವು ನಾಯಕನಾಗಿ ಆದೇಶಿಸುವ ಹಾಗೂ ಅನುಯಾಯಿಗಳೊಂದಿಗೆ ಕೆಲಸ ಮಾಡಿಸುವ ಆಧುನಿಕ ನಾಯಕರನ್ನು ಕಾಣುವುದಿಲ್ಲ. ಇತಿಹಾಸ ಪ್ರಸಿದ್ಧ ಖಂದಕ್ ಯುದ್ಧಕ್ಕಾಗಿ ಅನುಚರರು ಹಸಿವು ದಾಹ ಸಹಿಸಿ, ಹೊಟ್ಟೆಗೆ ಕಲ್ಲು ಕಟ್ಟಿಕೊಂಡು ಹೊಂಡ ತೋಡುವಾಗ ಪ್ರವಾದಿ(ﷺ) ಯವರು ಎರಡು ಕಲ್ಲುಗಳನ್ನು ಕಟ್ಟಿ ಅವರಿಗೆ ನಾಯಕತ್ವ ನೀಡಿದರು. ತಮಗೆ ಸಿಕ್ಕಿದ ಆಹಾರವನ್ನುಕೂಡ ಜೊತೆಗಾರರಿಗೆ ಹಂಚುತ್ತಿದ್ದ ಪ್ರವಾದಿ(ﷺ) ಯವರು ಅವರ ಸಂತೋಷವನ್ನು ತಮ್ಮ ಸಂತೋಷವಾಗಿಯೂ ಅವರ ದುಃಖವನ್ನು ತಮ್ಮ ದುಃಖವಾಗಿಯೂ ಪರಿಗಣಿಸಿದರು. ತಮ್ಮ ಜೊತೆಗಾರರು ಅನುಭವಿಸುತ್ತಿದ್ದ ಸಂಕಷ್ಟಗಳನ್ನು ಅವರು ಬಾಯಿಬಿಟ್ಟು ಹೇಳದಿದ್ದರೂ ಅದನ್ನು ಅರ್ಥ ಮಾಡಿಕೊಳ್ಳುತ್ತಿದ್ದ ಪ್ರವಾದಿ(ﷺ) ಯವರು ಅವರಿಗೆ ತಮ್ಮ ಕೈಲಾದಷ್ಟು ಸಹಾಯಗಳನ್ನು ಮಾಡುತ್ತಿದ್ದರು.

ಒಮ್ಮೆ ಜಾಬಿರ್ ಬಿನ್ ಅಬ್ದುಲ್ಲ(ﷺ) ಯುದ್ಧ ಮುಗಿದು ಪ್ರವಾದಿ(ﷺ) ಯವರ ಸಂಗಡ ಮರಳುತ್ತಿದ್ದಾಗ ಪ್ರವಾದಿ(ﷺ) ಯವರು ಅವರ ಮನೆಯ ಸ್ಥಿತಿಗತಿಯ ಕುರಿತು ವಿಚಾರಿಸಿದರು. ಜಾಬಿರ್ ತಮ್ಮ ಬಾಧ್ಯತೆ ಹಾಗೂ ಮನೆಯ ಪರಿಸ್ಥಿತಿಯನ್ನು ಪ್ರವಾದಿಯವರಿಗೆ ವಿವರಿಸಿದರು. ಆಗ ಪ್ರವಾದಿ(ﷺ) ಯವರು ಕಷ್ಟದಲ್ಲಿರುವ ನೀವು ನಿಮ್ಮ ಒಂಟೆಯನ್ನು ನನಗೆ ಮಾರಾಟ ಮಾಡಬಹುದಲ್ಲವೇ? ಎಂದು ಕೇಳಿದರು. ಜಾಬಿರ್ ಅದನ್ನು ಪ್ರವಾದಿ(ﷺ) ಯವರಿಗೆ ಮಾರಲು ಒಪ್ಪಿದರು. ಪ್ರವಾದಿ(ﷺ) ಯವರು ನೀಡಿದ ಮೊತ್ತದೊಂದಿಗೆ ಹೊರಡಲನುವಾದ ಜಾಬಿರ್‌ರನ್ನು ಕರೆದು ಹೇಳುತ್ತಾರೆ. "ಈ ಒಂಟೆ ನಿಮಗೆ ಸೇರಿದೆ. ಇದನ್ನು ತೆಗೆದುಕೊಂಡು ಹೋಗಿರಿ."

## ನ್ಯಾಯವಂತ ನ್ಯಾಯಾಧೀಶ:

ಪ್ರವಾದಿ(ﷺ) ರವರು ತಮ್ಮ ಜನರು ಯಾವ ತಪ್ಪು ಮಾಡಿದರೂ ಅದನ್ನು ಸಮರ್ಥಿಸುವ ಹಾಗೂ ಇತರರು ಒಂದು ಚಿಕ್ಕ ತಪ್ಪೆಸಗಿದರೂ ಅವರ ವಿರುದ್ಧ ಖಡ್ಗವೆತ್ತಿಕೊಳ್ಳುವ ಹೊಸ ಕಾಲಘಟ್ಟದ 'ನ್ಯಾಯವಂತ' ರಂತಿರಲಿಲ್ಲ. ಬದಲಾಗಿ, ಶತ್ರುವಾಗಿರಲಿ, ಮಿತ್ರನಾಗಿರಲಿ ಯಾರ ಬಳಿ ಸತ್ಯ ಮತ್ತು ನ್ಯಾಯವಿದೆಯೋ ಅವರ ಪರವಾಗಿ ತೀರ್ಪು ನೀಡುವುದು ಪ್ರವಾದಿ(ﷺ) ಯವರ ಪದ್ಧತಿಯಾಗಿತ್ತು. ಉನ್ನತ ಗೋತ್ರಕ್ಕೆ ಸೇರಿದ ಹೆಣ್ಣೋರ್ವಳು ಕಳ್ಳತನ ಮಾಡಿದ ಪ್ರಕರಣದಲ್ಲಿ ಪ್ರವಾದಿ(ﷺ) ಯವರು ಆಕೆಯ ವಿರುದ್ಧ ತೀರ್ಪಿತ್ತರು. ಆಗ ಕೆಲವರು ಅವಳ ಗೋತ್ರದ ಬಗ್ಗೆ ಪ್ರವಾದಿ(ﷺ) ಯವರಿಗೆ ನೆನಪಿಸಿಕೊಟ್ಟರು. ಆ ಸಂದರ್ಭ ಪ್ರವಾದಿ(ﷺ) ಹೇಳುತ್ತಾರೆ. "ನನ್ನ ಪುತ್ರಿ ಫಾತಿಮ ಕದ್ದರೂ ನಾನು ಆಕೆಯ ಕೈ ಕಡಿಯುತ್ತೇನೆ." ಈ ನ್ಯಾಯಪ್ರಜ್ಞೆಯನ್ನು ಶತ್ರುಗಳು ಕೂಡ ಪ್ರಶಂಸಿಸಿದ್ದರು.

## ವಿಶಾಲ ಮನೋಭಾವ:

ವೈರತ್ವವನ್ನಿಟ್ಟುಕೊಂಡವರೊಂದಿಗೆ ಪ್ರೀತಿಯಿಂದ ವರ್ತಿಸುವುದು ವಿಶ್ವಾಸ ಮತ್ತು ಸಹನಾಶೀಲತೆಯನ್ನು ಮೈಗೂಡಿಸಿಕೊಂಡ ಅನುಗ್ರಹೀತರಿಗೆ ಮಾತ್ರ ಸಾಧ್ಯವಾಗುವ ಕಾರ್ಯವಾಗಿದೆ.

ಕುರ್‌ಆನ್ ಹೇಳುತ್ತದೆ.

﴿وَلَا تَسْتَوِي الْحَسَنَةُ وَلَا السَّيِّئَةُ ادْفَعْ بِالَّتِي هِيَ أَحْسَنُ فَإِذَا الَّذِي بَيْنَكَ وَبَيْنَهُ عَدَاوَةٌ كَأَنَّهُ وَلِيٌّ حَمِيمٌ ﴿٣٤﴾ وَمَا يُلَقَّاهَا إِلَّا الَّذِينَ صَبَرُوا وَمَا يُلَقَّاهَا إِلَّا ذُو حَظٍّ عَظِيمٍ ﴿٣٥﴾﴾

"ಒಳಿತು ಮತ್ತು ಕೆಡುಕು ಸರಿಸಮಾನವಲ್ಲ. ನೀವು ಕೆಡುಕನ್ನು ಅತ್ಯುತ್ತಮ ಒಳಿತಿನ ಮೂಲಕ ದೂರೀಕರಿಸಿರಿ. (ಆಗ) ನಿಮ್ಮೊಂದಿಗೆ ಹಗೆತನ ಕಟ್ಟಿಕೊಂಡವರು ನಿಮ್ಮ ಆಪ್ತಮಿತ್ರನಾಗಿ ಬಿಡುವುದನ್ನು ನೀವು ಕಾಣುವಿರಿ. ಈ ಗುಣವಿಶೇಷವು ಸಹನಶೀಲರಿಗಲ್ಲದೆ ಇನ್ನಾರಿಗೂ ಲಭ್ಯವಾಗುವುದಿಲ್ಲ. ಈ ಸ್ಥಾನವು ಮಹಾ ಅದೃಷ್ಟಶಾಲಿಗಳ ಹೊರತು ಮತ್ತಾರಿಗೂ ಪ್ರಾಪ್ತವಾಗುವುದಿಲ್ಲ." (41:34-35)

ಪ್ರವಾದಿ(ﷺ) ಯವರ ಜೀವನವು ಇದಕ್ಕಿರುವ ಉತ್ತಮ ಉದಾಹರಣೆಯಾಗಿದೆ.

ಸುಹೈಲ್ ಬಿನ್ ಅಮ್ರ್ ಹಲವು ಯುದ್ಧಗಳಲ್ಲಿ ಶತ್ರು ಪಾಳಯದಲ್ಲಿ ನೆಲೆಗೊಂಡು ಬದ್ರ್ ಯುದ್ಧದಲ್ಲಿ ಕೈದಿಯಾಗಿ ಸೆರೆಹಿಡಿಯಲ್ಪಟ್ಟ ವ್ಯಕ್ತಿಯಾಗಿದ್ದಾರೆ. ಉಮರ್(ರ) ಕೈದಿಯಾದ ಅವರೆಡೆಗೆ ನೋಡಿ ಹೇಳಿದರು. "ಪ್ರವಾದಿಯವರೇ, ಸುಹೈಲ್‌ನನ್ನು ನನಗೆ ಬಿಟ್ಟು ಕೊಡಿ. ಅವನ ಮುಂದಿನ ಪಂಕ್ತಿಯ ಹಲ್ಲುಗಳನ್ನು ನಾನು ಕಿತ್ತು ಹಾಕುತ್ತೇನೆ. ಅವನು ಇನ್ನು ಮುಂದೆ ಇಸ್ಲಾಮಿನ ವಿರುದ್ಧ ಯಾವತ್ತೂ ಮಾತನಾಡಬಾರದು."

ಪ್ರವಾದಿ(ﷺ) ಯವರು ಅವರಿಗೆ ಅನುಮತಿ ನೀಡಲಿಲ್ಲ. ಅನಂತರ ಹುದೈಬಿಯ ಒಪ್ಪಂದದ ಸಂದರ್ಭದಲ್ಲಿ ಪ್ರವಾದಿ(ﷺ) ಯವರನ್ನು ವಿರೋಧಿಸುವುದು ಕೂಡಾ ಇದೇ ಸುಹೈಲ್ ಬಿನ್ ಅಮ್ರ್! ಅಲ್ಲಿಯೂ ಪ್ರವಾದಿ(ﷺ) ಯವರು ಸುಹೈಲ್‌ನನ್ನು ಕ್ಷಮಿಸಿದರು. ಆ ಕಾರಣದಿಂದಲೇ ಗೌರವಾನ್ವಿತರೂ ವಾಗ್ಮಿಯೂ ಆಗಿದ್ದ ಸುಹೈಲ್ ಬಿನ್ ಅಮ್ರ್ ಇಸ್ಲಾಮ್ ಸ್ವೀಕರಿಸಿದರು. ಅವರು ಧಾರಾಳ ಸುನ್ನತ್ ನಮಾಝ್ ನಿರ್ವಹಿಸುವ, ದಾನಧರ್ಮ ಮಾಡುವ, ಉಪವಾಸ ಆಚರಿಸುವ, ತಮ್ಮ ವಾಕ್ ಸಾಮರ್ಥ್ಯವನ್ನು ಇಸ್ಲಾಮಿಗಾಗಿ ಉಪಯೋಗಿಸುವ ಪ್ರವಾದಿ(ﷺ) ಯವರ ಅನುಚರರಾಗಿ ಮಾರ್ಪಟ್ಟರು.

ಲೋಕ ಪ್ರವಾದಿ ತಮ್ಮನ್ನು ಪ್ರಬಲವಾಗಿ ವಿರೋಧಿಸಿ ಹುಟ್ಟಿ ಬೆಳೆದ ನೆಲದಿಂದ ಹೊರದಬ್ಬಿದ ಜನತೆಯ ಮೇಲೆ ಅಧಿಕಾರ ಪ್ರಾಪ್ತವಾದಾಗ ಇತಿಹಾಸದಲ್ಲಿ ಹೋಲಿಕೆ ಇಲ್ಲದಂತಹ ರೂಪದಲ್ಲಿ ಅವರನ್ನು ಕ್ಷಮಿಸುವ ಹೃದಯ ವೈಶಾಲ್ಯತೆಯನ್ನು ಮೆರೆದವರು. ತಮ್ಮ ಮಸೀದಿಯಲ್ಲಿ ಮೂತ್ರಿಸಿದ ಗ್ರಾಮೀಣ ವ್ಯಕ್ತಿಯ ಮೇಲೆ ಇತರರು ಏರಿ ಹೋದಾಗ ಅವರನ್ನು ತಡೆದ ಪ್ರವಾದಿ(ﷺ) ಯವರ ನಿಲುವು ಅತ್ಯಂತ ಪ್ರಸಿದ್ಧವಾಗಿದೆ. ಇವೆಲ್ಲವೂ ಪ್ರವಾದಿಯವರ ವಿಶಾಲ ಮನೋಭಾವದ ಮಹೋನ್ನತ ಉದಾಹರಣೆಗಳಾಗಿವೆ.

## ಮಾನವ ಪ್ರೇಮಿ:

ಪ್ರತಿಯೊಬ್ಬರು ಸ್ವರ್ಗವಾಸಿಗಳಾಗಬೇಕು ಎಂಬುದು ಪ್ರವಾದಿ(ﷺ) ಯವರ ಆಗ್ರಹವಾಗಿತ್ತು. ಆದುದರಿಂದ ಅವರು ಸತ್ಯಧರ್ಮದ ಸಂದೇಶವು ಎಲ್ಲರಿಗೂ ತಲುಪಿಸಲು ಅಹರ್ನಿಶಿ ಪ್ರಯತ್ನಿಸಿದರು. ಯಹೂದಿ ಹುಡುಗನೊಬ್ಬ ಕಾಯಿಲೆ ಪೀಡಿತನಾದಾಗ ಪ್ರವಾದಿ(ﷺ) ಯವರು ಅವನ ಮನೆಗೆ ತೆರಳಿ ಇಸ್ಲಾಮ್ ಸ್ವೀಕರಿಸುವಂತೆ ಹೇಳಿದರು. ಆಗ ಹುಡುಗ ತನ್ನ ಬಳಿ ನಿಂತಿದ್ದ ತಂದೆಯೆಡೆಗೆ ನೋಡಿದ. ತಂದೆಯ ಒಪ್ಪಿಗೆಯ ಮೇರೆಗೆ ಅವನು ಸತ್ಯಧರ್ಮ ಸ್ವೀಕರಿಸಿದ. ಆ ಮನೆಯಿಂದ ಹೊರಡುವಾಗ ಪ್ರವಾದಿ(ﷺ) ಹೇಳುತ್ತಾರೆ. "ಈ ಹುಡುಗನನ್ನು ನರಕಾಗ್ನಿಯಿಂದ ರಕ್ಷಿಸಿದ ಅಲ್ಲಾಹನಿಗೆ ಸರ್ವಸ್ತುತಿ."

ಪ್ರವಾದಿ(ﷺ) ಯವರ ವೈಶಿಷ್ಟ್ಯತೆಯನ್ನು ಕುರ್‌ಆನ್ ಹೀಗೆ ವಿವರಿಸಿದೆ.

﴿لَقَدْ جَاءَكُمْ رَسُولٌ مِّنْ أَنفُسِكُمْ عَزِيزٌ عَلَيْهِ مَا عَنِتُّمْ حَرِيصٌ عَلَيْكُم بِالْمُؤْمِنِينَ رَءُوفٌ رَّحِيمٌ ﴿١٢٨﴾﴾

"ನಿಮ್ಮ ಬಳಿಗೆ ಓರ್ವ ಸಂದೇಶವಾಹಕರು ಬಂದಿರುತ್ತಾರೆ. ಅವರು ನಿಮ್ಮವರಿಂದಲೇ ಆಗಿರುತ್ತಾರೆ. ನೀವು ನಷ್ಟಹೊಂದುವುದು ಅವರಿಗೆ ಅಸಹನೀಯವಾಗಿದೆ. ಅವರು ನಿಮ್ಮ ಯಶಸ್ಸಿಗೆ ಹಂಬಲಿಸುವವರಾಗಿದ್ದಾರೆ. ಅವರು ಸತ್ಯವಿಶ್ವಾಸಿಗಳಿಗೆ ಸಹೃದಯಿಗಳೂ ಕರುಣಾಳುವೂ ಆಗಿರುತ್ತಾರೆ." (9:128)

## ಸತ್ಯಸಂಧತೆಗೆ ಶತ್ರುವಿನ ಮೆಚ್ಚುಗೆ:

ಪ್ರವಾದಿ(ﷺ) ಯವರ ನ್ಯಾಯ ಮತ್ತು ಪ್ರಾಮಾಣಿಕತೆಯನ್ನು

ಶತ್ರುಗಳು ಕೂಡಾ ಅಂಗೀಕರಿಸಬೇಕಾಯಿತು. ಹುದೈಬಿಯ ಒಪ್ಪಂದ ಜಾರಿಯಲ್ಲಿದ್ದಾಗ ಒಮ್ಮೆ ಹಿರ್ಕಲ್ ಚಕ್ರವರ್ತಿ ಅಬೂ ಸುಫ್ಯಾನರನ್ನು ತಮ್ಮ ಆಸ್ಥಾನಕ್ಕೆ ಕರೆಸಿದರು. ಮಾತಿನ ನಡುವೆ ಅವರು ಪ್ರವಾದಿ (ﷺ) ಯವರ ಕುರಿತು ಕೆಲವು ಪ್ರಶ್ನೆಗಳನ್ನು ಕೇಳಿದರು. “ಅವರು ಸುಳ್ಳಾಡುತ್ತಾರೆಯೇ?”

ಅಬೂ ಸುಫ್ಯಾನ್: “ಇಲ್ಲ.”

“ಅವರು ಮೋಸ ಮಾಡುತ್ತಾರೆಯೇ?”

ಅಬೂ ಸುಫ್ಯಾನ್: “ಇಲ್ಲ.”

ಈ ಘಟನೆ ನಡೆದಾಗ ಅಬೂ ಸುಫ್ಯಾನ್ ಇಸ್ಲಾಮ್ ಸ್ವೀಕರಿಸಿರಲಿಲ್ಲ. ಅವರು ಶತ್ರು ಪಾಳಯದ ನಾಯಕರಾಗಿದ್ದರು. ಆದರೂ ಅವರಿಗೆ ಪ್ರವಾದಿ(ﷺ) ಯವರ ಸದ್ಗುಣಗಳನ್ನು ಒಪ್ಪಿಕೊಳ್ಳಬೇಕಾಗಿ ಬಂದದ್ದು ಗಮನಾರ್ಹ ಸಂಗತಿಯಾಗಿದೆ.

**ಇತರ ಜೀವಿಗಳೊಂದಿಗೆ ಪ್ರೀತಿ:**

ಪ್ರವಾದಿ(ﷺ) ಯವರು ಮನುಷ್ಯರೊಂದಿಗೆ ಮಾತ್ರವಲ್ಲ, ಇತರ ಜೀವಜಾಲಗಳೊಂದಿಗೂ ಪ್ರೀತಿ ಮತ್ತು ಕರುಣೆಯನ್ನು ತೋರಿಸುತ್ತಿದ್ದರಲ್ಲದೆ, ತಮ್ಮ ಅನುಯಾಯಿಗಳಿಗೂ ಅದನ್ನು ಆದೇಶಿಸುತ್ತಿದ್ದರು. ಅನ್ಯಾಯವಾಗಿ ಒಂದು ಇರುವೆಯನ್ನು ಕೂಡ ನೋಯಿಸದ ಪ್ರವಾದಿ(ﷺ) ಹಸಿ ಕರುಳಿನ ಪ್ರತಿಯೊಂದರ ಮೇಲೂ ಕರುಣೆಯಿಂದ ವರ್ತಿಸಬೇಕೆಂದು ಲೋಕಕ್ಕೆ ಉಪದೇಶಿಸಿದರು. ಪ್ರಾಣಿಗಳನ್ನು ದಿಬ್ಬ ಮಾಡುವ ಸಂದರ್ಭದಲ್ಲಿ ಕತ್ತಿಯನ್ನು ಹರಿತಗೊಳಿಸುವ ಮೂಲಕ ಅದಕ್ಕಾಗುವ ನೋವನ್ನು ಕಡಿಮೆ ಮಾಡಬೇಕೆಂದು ಸೂಚಿಸಿರುವುದು ಅವರಿಗೆ ಜೀವಿಗಳ ಮೇಲಿದ್ದ ಕರುಣೆಗೆ ನಿದರ್ಶನವಾಗಿದೆ. ■

---

*07 ನೇ ಪುಟದಿಂದ*

## ಮುಖ್ತಸರ್ ಸಹೀಹುಲ್ ಬುಖಾರಿ

201. ಉಮರ್(ﷺ) ರಿಂದ ವರದಿ. ಅವರು ಅಲ್ಲಾಹನ ಸಂದೇಶವಾಹಕರೊಂದಿಗೆ(ﷺ) ವಿಚಾರಿಸಿದರು. “ನಾವು ಜನಾಬತ್ತಿನ ಸ್ಥಿತಿಯಲ್ಲಿ ಮಲಗಿ ನಿದ್ರಿಸಬಹುದೇ?” ಪ್ರವಾದಿ(ﷺ) ಹೇಳಿದರು. “ನಿಮ್ಮ ಪೈಕಿ ಯಾರಾದರೂ ಜನಾಬತ್ತಿನ ಸ್ಥಿತಿಯಲ್ಲಿದ್ದರೆ ವುದೂ ನಿರ್ವಹಿಸಿರಿ ಮತ್ತೆ ಮಲಗಿ ನಿದ್ರಿಸಿರಿ.”

**ಸಾರಾಂಶ :** ಇನ್ನೊಂದು ಹದೀಸಿನಲ್ಲಿ ಅವರು ಮೊದಲು ಗುಪ್ತಾಂಗವನ್ನು ಶುದ್ಧೀಕರಿಸಿಕೊಂಡು ನಂತರ ನಮಾಝಿಗೆ ನಿರ್ವಹಿಸುವಂತೆ ವುದೂ ನಿರ್ವಹಿಸಬೇಕು. ಆದರೆ ಅವನು ಸ್ನಾನ ಮಾಡುವ ಹೊರತು ನಮಾಝ್ ನಿರ್ವಹಿಸಬಾರದೆಂದು ಹೇಳಲಾಗಿದೆ.

### ಅಧ್ಯಾಯ 14

### (ಪತಿ-ಪತ್ನಿಯರ) ಗುಪ್ತಾಂಗಗಳು ಒಂದಾದರೆ (ಸ್ನಾನ ಕಡ್ಡಾಯ)

٢٠٢- عَـنْ أَبِي هُرَيْرَةَ رَضِيَ اللَّـهُ عَنْهُ، عَنِ النَّبِيِّ صَلَّى اللَّـهُ عَلَيْهِ وَسَـلَّمَ قَـالَ: «إِذَا جَلَـسَ بَيْنَ شُـعَبِهَا الْأَرْبَعِ ثُـمَّ جَهَدَهَا فَقَدْ وَجَبَ الْغَسْـلُ».
[رواه البخاري ٢٩١]

202. ಅಬೂಹುರೈರ(ﷺ) ವರದಿ. ಪ್ರವಾದಿ(ﷺ) ಹೇಳಿದರು. “ಪುರುಷನು (ತನ್ನ) ಸ್ತ್ರೀಯ ನಾಲ್ಕು ಭಾಗಗಳ ನಡುವೆ ಕುಳಿತುಕೊಂಡು ಬಳಿಕ ಪ್ರವೇಶಗೊಳಿಸಿದರೆ ಸ್ನಾನವು ಕಡ್ಡಾಯವಾಗುತ್ತದೆ.”

**ಸಾರಾಂಶ :** ಕೆಲವರು ಕೇವಲ ಪ್ರವೇಶಗೊಳಿಸುವುದರಿಂದ ಸ್ನಾನ ಕಡ್ಡಾಯವಾಗುವುದಿಲ್ಲ ಸ್ಖಲನವಾದರೆ ಮಾತ್ರ ಸ್ನಾನ ಕಡ್ಡಾಯವಾಗುತ್ತದೆ ಎಂದು ಹೇಳುತ್ತಾರೆ. ಬಹುಷ ಅವರಿಗೆ ಈ ಹದೀಸ್ ತಲುಪಿರಲಿಕ್ಕಿಲ್ಲ. ■

# ನಿನಗರಿವಿಲ್ಲದೇ ಅಲ್ಲಾಹು ನಿನ್ನನ್ನು ಒಳಿತಿನ ಮೂಲಕ ಪರೀಕ್ಷಿಸಬಹುದು!

ನಾಲಗೆಯ ಮೂಲಕ ಮಾತ್ರ ಕೃತಜ್ಞತೆ ಸಲ್ಲಿಸಿದರೆ ಸಾಕಾಗುವುದಿಲ್ಲ. ಬದಲಾಗಿ ಅಲ್ಲಾಹು ನಿನಗೆ ಔದಾರ್ಯ ತೋರಿಸಿ ನಿನಗೆ ಅನುಗ್ರಹಗಳನ್ನು ದಯಪಾಲಿಸಿದ್ದಾನೆ ಎಂದು ನೀನು ನಿನ್ನ ಹೃದಯದ ಮೂಲಕ ಒಪ್ಪಿಕೊಳ್ಳಬೇಕು. ಇದು ಅನಿವಾರ್ಯ. ಮಾತ್ರವಲ್ಲ, ಕರ್ಮದ ಮೂಲಕವೂ ನೀನು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕು. ಅಂದರೆ ಅವನನ್ನು ಅನುಸರಿಸುವ ಮೂಲಕ, ಅವನ ಆಜ್ಞೆಗಳನ್ನು ಪಾಲಿಸುವ ಮೂಲಕ ಮತ್ತು ಅವನು ವಿರೋಧಿಸಿದ ಕಾರ್ಯಗಳಿಂದ ದೂರವಾಗುವ ಮೂಲಕ ಅವನಿಗೆ ಕೃತಜ್ಞನಾಗಿರಬೇಕು.

✍ ನೂರಿಸ್ ಅಲ್‌ಹಾಶಿಮೀ

ಅಲ್ಲಾಹು(ﷻ) ಹೇಳುತ್ತಾನೆ:

﴿وَنَبْلُوكُم بِٱلشَّرِّ وَٱلْخَيْرِ فِتْنَةً ۖ وَإِلَيْنَا تُرْجَعُونَ ﴿٣٥﴾﴾

"ನಾವು ನಿಮ್ಮನ್ನು ಕೆಡುಕು ಮತ್ತು ಒಳಿತುಗಳ ಮೂಲಕ ಪರೀಕ್ಷಿಸು-ವೆವು. ನೀವು ನಮ್ಮ ಬಳಿಗೇ ಮರಳಿ ಬರುವಿರಿ." (ಕುರ್‌ಆನ್ 21:35)

**ಪರೀಕ್ಷೆ ಎರಡು ವಿಧದಲ್ಲಿದೆ:**

1. ಕೆಡುಕಿನ ಮೂಲಕ ಪರೀಕ್ಷಿಸುವುದು.
2. ಒಳಿತಿನ ಮೂಲಕ ಪರೀಕ್ಷಿಸುವುದು.

ಅಶ್ಶಂಕೀತೀ(ರ) ತಮ್ಮ 'ಅಲ್‌ಅದ್ಬುಬ್ಬು ನ್ನಮೀರ್' (1/74) ಎಂಬ ಪುಸ್ತಕದಲ್ಲಿ ಹೇಳುತ್ತಾರೆ:

"ಸಂಶಯವೇ ಇಲ್ಲ. ಅರಬ್ಬಿಗಳು ಬಲಾಅ್ (ಪರೀಕ್ಷೆ) ಎಂಬ ಶಬ್ದವನ್ನು ಕೆಡುಕಿನ ಮೂಲಕ ಪರೀಕ್ಷಿಸುವುದಕ್ಕೂ ಒಳಿತಿನ ಮೂಲಕ ಪರೀಕ್ಷಿಸುವುದಕ್ಕೂ ಬಳಸುತ್ತಾರೆ. ಆದರೆ ಕೆಲವರು ಒಳಿತಿನ ಮೂಲಕ ಪರೀಕ್ಷಿಸುವುದಕ್ಕೆ ಈ ಶಬ್ದವನ್ನು ಬಳಸುವುದನ್ನು ವಿರೋಧಿಸುತ್ತಾರೆ. ಆದರೆ ಅರಬ್ಬರು ಸಾಮಾನ್ಯವಾಗಿ ಎರಡಕ್ಕೂ ಈ ಶಬ್ದವನ್ನು ಬಳಕೆ ಮಾಡುತ್ತಾರೆ. ಒಳಿತಿನ ಮೂಲಕ ಪರೀಕ್ಷಿಸುವು-ದಕ್ಕೆ ಈ ಶಬ್ದವನ್ನು ಬಳಕೆ ಮಾಡಲಾಗುತ್ತದೆ ಎನ್ನುವುದಕ್ಕೆ ಪುರಾವೆ ಕವಿ ಝುಹೈರರ ಈ ಕವನ.

جَزَى اللَّهُ بِالْإِحْسَانِ مَا فَعَلَا بِكُمْ...

وَأَبْلَاهُمَا خَيْرَ الْبَلَاءِ الَّذِي يَبْلُو

"ಅವರಿಬ್ಬರು ನಿಮ್ಮೊಡನೆ ಏನು ಮಾಡಿದರೋ ಅದಕ್ಕೆ ಅಲ್ಲಾಹು ಉತ್ತಮ ಪ್ರತಿಫಲ ನೀಡಲಿ... ಪರೀಕ್ಷಿಸಬಹುದಾದ ಅತ್ಯುತ್ತಮ ಪರೀಕ್ಷೆಯ ಮೂಲಕ ಅಲ್ಲಾಹು ಅವರಿಬ್ಬರನ್ನು ಪರೀಕ್ಷಿಸಿದನು."

ಅಲ್ಲಾಹು(ﷻ) ಹೇಳುತ್ತಾನೆ:

﴿وَفِي ذَٰلِكُم بَلَاءٌ مِّن رَّبِّكُمْ عَظِيمٌ ﴿٤٩﴾﴾

"ಖಂಡಿತವಾಗಿಯೂ ಅದರಲ್ಲಿ ನಿಮ್ಮ ರಬ್ಬಿನ ಕಡೆಯ ಒಂದು ಮಹಾ ಪರೀಕ್ಷೆಯಿತ್ತು." (ಕುರ್ಆನ್ 2:49)

ಅಲ್ಲಾಹು(ﷻ) ಅವನ ದಾಸನನ್ನು ಕೆಡುಕಿನ ಮೂಲಕ ಪರೀಕ್ಷಿಸುತ್ತಾನೆ. ಅಂದರೆ ರೋಗ, ಆಪ್ತರ ಮರಣ, ಧನನಷ್ಟ ಮುಂತಾದವುಗಳ ಮೂಲಕ ಪರೀಕ್ಷಿಸುತ್ತಾನೆ. ತಾನು ನಿರ್ಣಯಿಸಿದ ಯಾತನಾಮಯ ನಿರ್ಣಯದ ಮೂಲಕ (ವಿಧಿಯ ಮೂಲಕ) ತನ್ನ ದಾಸನನ್ನು ಪರೀಕ್ಷಿಸುತ್ತಾನೆ. ಆಗ ದಾಸನು ತಾಳ್ಮೆ ವಹಿಸುವುದನ್ನು, ದುಃಖಿಸದಿರುವುದನ್ನು ಮತ್ತು ಕೋಪಿಸದಿರುವುದನ್ನು ಅಲ್ಲಾಹು ಇಷ್ಟಪಡುತ್ತಾನೆ.

ಪರೀಕ್ಷೆಯು ಒಳಿತಿನ ಮೂಲಕವೂ ಉಂಟಾಗುತ್ತದೆ. ಅಲ್ಲಾಹು ದಾಸನಿಗೆ ಲೆಕ್ಕ ಮಾಡಲು ಸಾಧ್ಯವಾಗದಷ್ಟು ಹೇರಳ ಅನುಗ್ರಹಗಳನ್ನು ನೀಡಿ ಪರೀಕ್ಷಿಸುತ್ತಾನೆ. ಆರೋಗ್ಯ, ಸೌಖ್ಯ ಇತ್ಯಾದಿಗಳನ್ನು ನೀಡಿ ಪರೀಕ್ಷಿಸುತ್ತಾನೆ. ಅಲ್ಲಾಹು(ﷻ) ನಿನಗೆ ಏನೆಲ್ಲ ಅನುಗ್ರಹಗಳನ್ನು ನೀಡುತ್ತಾನೋ ಅವೆಲ್ಲದರ ಮೂಲಕ ನಿನ್ನನ್ನು ಪರೀಕ್ಷಿಸುತ್ತಾನೆ. ನೀನು ಆ ಅನುಗ್ರಹಗಳಿಗಾಗಿ ಅಲ್ಲಾಹನಿಗೆ ಕೃತಜ್ಞನಾಗುತ್ತೀಯೋ ಅಥವಾ ಕೃತಘ್ನನಾಗುತ್ತೀಯೋ ಎಂದು ತಿಳಿಯುವುದಕ್ಕಾಗಿ.

ನಾಲಗೆಯ ಮೂಲಕ ಮಾತ್ರ ಕೃತಜ್ಞತೆ ಸಲ್ಲಿಸಿದರೆ ಸಾಕಾಗುವುದಿಲ್ಲ. ಬದಲಾಗಿ ಅಲ್ಲಾಹು ನಿನಗೆ ಔದಾರ್ಯ ತೋರಿಸಿ ನಿನಗೆ ಅನುಗ್ರಹಗಳನ್ನು ದಯಪಾಲಿಸಿದ್ದಾನೆ ಎಂದು ನೀನು ನಿನ್ನ ಹೃದಯದ ಮೂಲಕ ಒಪ್ಪಿಕೊಳ್ಳಬೇಕು. ಇದು ಅನಿವಾರ್ಯ.

ಮಾತ್ರವಲ್ಲ, ಕರ್ಮದ ಮೂಲಕವೂ ನೀನು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕು. ಅಂದರೆ ಅವನನ್ನು ಅನುಸರಿಸುವ ಮೂಲಕ, ಅವನ ಆಜ್ಞೆಗಳನ್ನು ಪಾಲಿಸುವ ಮೂಲಕ ಮತ್ತು ಅವನು ವಿರೋಧಿಸಿದ ಕಾರ್ಯಗಳಿಂದ ದೂರವಾಗುವ ಮೂಲಕ ಅವನಿಗೆ ಕೃತಜ್ಞನಾಗಿರಬೇಕು.

ಅಲ್ಲಾಹು(ﷻ) ಹೇಳುತ್ತಾನೆ:

﴿اعْمَلُوا آلَ دَاوُودَ شُكْرًا ۚ وَقَلِيلٌ
مِّنْ عِبَادِيَ الشَّكُورُ ﴿١٣﴾﴾

"ಓ ದಾವೂದ್ ಕುಟುಂಬದವರೇ! ಕೃತಜ್ಞತೆಯ ಕರ್ಮಗಳನ್ನು ನಿರ್ವಹಿಸಿರಿ. ನನ್ನ ದಾಸರಲ್ಲಿ ಕೃತಜ್ಞತೆ ಸಲ್ಲಿಸುವವರು ಬಹಳ ವಿರಳ." (ಕುರ್ಆನ್ 34:13)

ಕೃತಜ್ಞತೆ ಸಲ್ಲಿಸುವುದು ಒಂದು ಕರ್ಮವಾಗಿದೆಯೆಂದು ಇದರಿಂದ ಅರ್ಥ ಮಾಡಿಕೊಳ್ಳಬಹುದು. ಅಂದರೆ ಅಲ್ಲಾಹನ(ﷻ) ಅನುಸರಣೆ ಮಾಡುವ ಮೂಲಕ, ಅವನ ಆಜ್ಞೆಗಳನ್ನು ಪಾಲಿಸುವ ಮೂಲಕ ಮತ್ತು ಅವನು ವಿರೋಧಿಸಿದ ಕಾರ್ಯಗಳಿಂದ ದೂರವಾಗುವ ಮೂಲಕ ಅವನಿಗೆ ಕೃತಜ್ಞತೆ ಸಲ್ಲಿಸಬೇಕು.

ಯಾರಿಗೆ ಅಲ್ಲಾಹು(ﷻ) ಅನುಗ್ರಹಗಳನ್ನು ದಯಪಾಲಿಸಿದ್ದಾನೋ ಅವರು ಅವನಿಗೆ ಕೃತಜ್ಞತೆ ಸಲ್ಲಿಸಬೇಕಾದುದು ಕಡ್ಡಾಯ.

ತಾನು ಅನುಗ್ರಹಿಸಿದ ಅನುಗ್ರಹಗಳಿಗೆ ದಾಸನು ಕೃತಜ್ಞತೆ ಸಲ್ಲಿಸುವಾಗಲೆಲ್ಲಾ ಅಲ್ಲಾಹು ಅವನಿಗೆ ಅನುಗ್ರಹಗಳನ್ನು ಹೆಚ್ಚಿಸುತ್ತಾನೆ.

ಅಲ್ಲಾಹು(ﷻ) ಹೇಳುತ್ತಾನೆ:

﴿وَإِذْ تَأَذَّنَ رَبُّكُمْ لَئِن
شَكَرْتُمْ لَأَزِيدَنَّكُمْ ۖ وَلَئِن
كَفَرْتُمْ إِنَّ عَذَابِي لَشَدِيدٌ ﴿٧﴾﴾

"ನೀವು ಕೃತಜ್ಞತೆ ಸಲ್ಲಿಸಿದರೆ ನಾನು ನಿಮಗೆ ಹೆಚ್ಚಿಸಿಕೊಡುತ್ತೇನೆ. ಇನ್ನು ನೀವು ಕೃತಘ್ನರಾದರೆ ನನ್ನ ಶಿಕ್ಷೆಯು ಬಹಳ ಕಠೋರವಾಗಿದೆ ಎಂದು ನಿಮ್ಮ ರಬ್ಬ್ ಘೋಷಿಸಿದ ಸಂದರ್ಭ." (ಕುರ್ಆನ್ 14:7)

ಇಬ್ನ್ ಜರೀರ್ ಅತ್ತಬರಿ(ﷺ) ತಮ್ಮ ತಫ್ಸೀರಿನಲ್ಲಿ ಹೇಳುತ್ತಾರೆ:

"ತಾನು ದಯಪಾಲಿಸಿದ ಅನುಗ್ರಹಕ್ಕೆ ಅವರು ಕೃತಜ್ಞತೆ ಸಲ್ಲಿಸಿದರೆ ಅವರಿಗೆ ಅನುಗ್ರಹಗಳನ್ನು ಹೆಚ್ಚಿಸಿಕೊಡುತ್ತೇನೆಂದು ಅಲ್ಲಾಹು ಅವರಿಗೆ ತಿಳಿಸುತ್ತಿದ್ದಾನೆ."

ಅಶ್ಶಂಕೀತೀ ತಮ್ಮ ಅದ್ವಾಉಲ್ ಬಯಾನ್‌ನಲ್ಲಿ ಹೇಳುತ್ತಾರೆ.

"ಅಂದರೆ: ಪರೀಕ್ಷೆಗಳನ್ನು ಎದುರಿಸಲು ನಿಮ್ಮಲ್ಲಿ ಎಷ್ಟು ತಾಳ್ಮೆಯಿದೆ ಮತ್ತು ಅನುಗ್ರಹಗಳಿಗೆ ನೀವೆಷ್ಟು ಕೃತಜ್ಞತೆ ಸಲ್ಲಿಸುತ್ತೀರಿ ಎಂದು ನಾವು ನಿಮ್ಮನ್ನು ಪರೀಕ್ಷಿಸುತ್ತೇವೆ. ಮರಣಾನಂತರ

ನೀವು ನಮ್ಮ ಬಳಿಗೆ ಮರಳಿ ಬರುತ್ತೀರಿ. ಆಗ ನಿಮ್ಮಲ್ಲಿರುವ ತಾಳ್ಮೆ ಮತ್ತು ಕೃತಜ್ಞತೆಯ ಅನುಪಾತದಲ್ಲಿ ನಾವು ನಿಮಗೆ ಪ್ರತಿಫಲವನ್ನು ನೀಡುತ್ತೇವೆ."

﴿وَنَبْلُوكُم بِٱلشَّرِّ وَٱلْخَيْرِ فِتْنَةً ۖ
وَإِلَيْنَا تُرْجَعُونَ ﴿٣٥﴾﴾

"ನಾವು ನಿಮ್ಮನ್ನು ಕೆಡುಕು ಮತ್ತು ಒಳಿತುಗಳ ಮೂಲಕ ಪರೀಕ್ಷಿಸುವೆವು. ನೀವು ನಮ್ಮ ಬಳಿಗೇ ಮರಳಿ ಬರುವಿರಿ." (ಕುರ್‌ಆನ್ 21:35)

ಈ ಆಯತ್ತನ್ನು ವ್ಯಾಖ್ಯಾನ ಮಾಡುತ್ತಾ ಇಬ್ನ್ ಝೈದ್(ﷺ) ಹೇಳುತ್ತಾರೆ.

"ಅವರು ಪ್ರೀತಿಸುವ ಮತ್ತು ದ್ವೇಷಿಸುವ ವಸ್ತುಗಳ ಮೂಲಕ ನಾವು ಅವರನ್ನು ಪರೀಕ್ಷಿಸುತ್ತೇವೆ. ನಾವು ಅವರನ್ನು ಆ ವಸ್ತುಗಳ ಮೂಲಕ ಪರೀಕ್ಷಿಸುತ್ತೇವೆ. ಅವರು ಪ್ರೀತಿಸುವ ವಸ್ತುವಿನ ವಿಷಯದಲ್ಲಿ ಅವರೆಷ್ಟು ಕೃತಜ್ಞತೆ ಸಲ್ಲಿಸುತ್ತಾರೆ ಮತ್ತು ಅವರು ದ್ವೇಷಿಸುವ ವಸ್ತುವಿನ ವಿಷಯದಲ್ಲಿ ಅವರೆಷ್ಟು ತಾಳ್ಮೆ ವಹಿಸುತ್ತಾರೆಂದು ನೋಡುವುದಕ್ಕಾಗಿ."

ಈ ಆಯತ್ತಿನ ವ್ಯಾಖ್ಯಾನದಲ್ಲಿ ಇಬ್ನ್ ಅಬ್ಬಾಸ್(ﷺ) ಹೇಳುತ್ತಾರೆ.

"ನಾವು ನಿಮ್ಮನ್ನು ಕಷ್ಟ–ಸುಖ, ಆರೋಗ್ಯ–ಅನಾರೋಗ್ಯ, ಸಿರಿತನ–ಬಡತನ, ಧರ್ಮಸಮ್ಮತ–ಧರ್ಮನಿಷಿದ್ಧ, ಆಜ್ಞಾಪಾಲನೆ–ಆಜ್ಞೋಲ್ಲಂಘನೆ, ಸನ್ಮಾರ್ಗ–ದುರ್ಮಾರ್ಗ ಮುಂತಾದವುಗಳ ಮೂಲಕ ಪರೀಕ್ಷಿಸುತ್ತೇವೆ."

﴿وَإِلَيْنَا تُرْجَعُونَ ﴿٣٥﴾﴾

"ನೀವು ನಮ್ಮ ಬಳಿಗೇ ಮರಳಿ ಬರುವಿರಿ." (ಕುರ್‌ಆನ್ 21:35)

ಈ ಆಯತ್ತಿನ ವ್ಯಾಖ್ಯಾದಲ್ಲಿ ಅವರು ಹೇಳುತ್ತಾರೆ.

"ನೀವು ನಮ್ಮ ಬಳಿಗೆ ಮರಳಿ ಬರುವಾಗ ನಿಮ್ಮ ಕರ್ಮಗಳಿಗೆ ನಾವು ಪ್ರತಿಫಲವನ್ನು ನೀಡುತ್ತೇವೆ. ಒಳಿತಾಗಿದ್ದರೆ ಒಳಿತು ಮತ್ತು ಕೆಡುಕಾಗಿದ್ದರೆ ಕೆಡುಕು." (ನೋಡಿ ತಫ್ಸೀರ್ ಅತ್ತಬರಿ)

ಇಬ್ನ್ ಕಸೀರ್(ﷺ) ತಮ್ಮ ತಫ್ಸೀರಿನಲ್ಲಿ ಹೇಳುತ್ತಾರೆ.

﴿وَنَبْلُوكُم بِٱلشَّرِّ وَٱلْخَيْرِ فِتْنَةً ۖ﴾

"ನಾವು ನಿಮ್ಮನ್ನು ಕೆಡುಕು ಮತ್ತು ಒಳಿತುಗಳ ಮೂಲಕ ಪರೀಕ್ಷಿಸುವೆವು." (ಕುರ್‌ಆನ್ 21:35)

ಅಂದರೆ ಒಮ್ಮೆ ವಿಪತ್ತನ್ನು ಎರಗಿಸುವ ಮೂಲಕ ಮತ್ತು ಇನ್ನೊಮ್ಮೆ ಅನುಗ್ರಹವನ್ನು ನೀಡುವ ಮೂಲಕ ನಾವು ನಿಮ್ಮನ್ನು ಪರೀಕ್ಷಿಸುತ್ತೇವೆ. ಯಾರು ಕೃತಜ್ಞತೆ ಸಲ್ಲಿಸುತ್ತಾರೆ ಮತ್ತು ಯಾರು ಕೃತಘ್ನರಾಗುತ್ತಾರೆ, ಯಾರು ಸಹನೆ ವಹಿಸುತ್ತಾರೆ ಮತ್ತು ಯಾರು ಕೋಪಿಸುತ್ತಾರೆ ಎಂದು ನಂತರ ನಾವು ನೋಡುತ್ತೇವೆ."

ಇಬ್ನುಲ್ ಕಯ್ಯಿಮ್(ﷺ) ತಮ್ಮ 'ಮದಾರಿಜು ಸ್ಸಾಲಿಕೀನ್' ಎಂಬ ಗ್ರಂಥದಲ್ಲಿ (2/208) ಹೇಳುತ್ತಾರೆ:

"ಕೆಲವು ಆರಿಫೀನ್‌ಗಳು ಹೇಳುತ್ತಾರೆ: ಅಲ್ಲಾಹು ನಿನ್ನನ್ನು ಯಾವೆಲ್ಲ ವಿಧದಲ್ಲಿ ಪರೀಕ್ಷಿಸುತ್ತಾನೋ ಅವೆಲ್ಲದರಲ್ಲೂ ನೀವು ತೃಪ್ತನಾಗಿರು. (ಅಲ್ಲಾಹನ ಬಗ್ಗೆ ಕೋಪಿಸಿಕೊಳ್ಳಬೇಡ). ಕಾರಣ ಅವನು ಏನನ್ನಾದರೂ ತಡೆಹಿಡಿಯುವುದಾದರೆ ಅದನ್ನು ನಿನಗೆ ನೀಡುವುದಕ್ಕಾಗಿಯೇ ತಡೆಹಿಡಿಯುತ್ತಿದ್ದಾನೆ. ಅವನು ನಿನ್ನನ್ನು ಪರೀಕ್ಷಿಸುವುದಾದರೆ ನಿನಗೆ ಸೌಖ್ಯವನ್ನು ನೀಡುವುದಕ್ಕಾಗಿಯೇ ಪರೀಕ್ಷಿಸುತ್ತಿದ್ದಾನೆ. ಅವನು ನಿನಗೆ ರೋಗವನ್ನು ನೀಡುವುದಾದರೆ ನಿನ್ನನ್ನು ಗುಣಮುಖನಾಗಿಸುವುದಕ್ಕಾಗಿಯೇ ರೋಗವನ್ನು ನೀಡುತ್ತಿದ್ದಾನೆ. ಅವನು ನಿನ್ನನ್ನು ಮೃತಪಡಿಸುವುದಾದರೆ ನಿನಗೆ ಜೀವ ನೀಡುವುದಕ್ಕಾಗಿಯೇ ಮೃತಪಡಿಸುತ್ತಿದ್ದಾನೆ. ಆದ್ದರಿಂದ ಒಂದು ಕ್ಷಣವಾದರೂ ಅವರ ಬಗ್ಗೆ ಅತೃಪ್ತನಾಗುವುದರ ಬಗ್ಗೆ ಎಚ್ಚರವಾಗಿರು. ಹಾಗೇನಾದರೂ ಆದರೆ ನೀನು ಅವನ ಕೋಪಕ್ಕೆ ತುತ್ತಾಗುವೆ."

ಇಬ್ನುಲ್ ಕಯ್ಯಿಮ್ ತಮ್ಮ 'ಉದ್ದತು ಸ್ಸಾಬಿರೀನ್' ಎಂಬ ಗ್ರಂಥದಲ್ಲಿ (132) ಹೇಳುತ್ತಾರೆ:

"ಸಿರಿತನ ಮತ್ತು ಬಡತನ ಪರೀಕ್ಷೆಯ ಕಾರಣಗಳೆಂದು ಅಲ್ಲಾಹು (ﷻ) ಇಲ್ಲಿ ತಿಳಿಸುತ್ತಿದ್ದಾನೆ. ಅಲ್ಲಾಹು(ﷻ) ಹೇಳುತ್ತಾನೆ:

﴿فَأَمَّا ٱلْإِنسَٰنُ إِذَا مَا ٱبْتَلَىٰهُ رَبُّهُۥ فَأَكْرَمَهُۥ وَنَعَّمَهُۥ
فَيَقُولُ رَبِّىٓ أَكْرَمَنِ ﴿١٥﴾ وَأَمَّآ إِذَا مَا ٱبْتَلَىٰهُ فَقَدَرَ
عَلَيْهِ رِزْقَهُۥ فَيَقُولُ رَبِّىٓ أَهَٰنَنِ ﴿١٦﴾ كَلَّا ۖ﴾

“ಮನುಷ್ಯನನ್ನು ಅವನ ರಬ್ಬ್ ಪರೀಕ್ಷಿಸುತ್ತಾ ಗೌರವಿಸಿ ಅನುಗ್ರಹಗಳನ್ನು ದಯಪಾಲಿಸಿದರೆ, ನನ್ನ ರಬ್ಬ್ ನನ್ನನ್ನು ಗೌರವಿಸಿದ್ದಾನೆ ಎಂದು ಅವನು ಹೇಳುತ್ತಾನೆ. ಆದರೆ ಅವನನ್ನು ಪರೀಕ್ಷಿಸುತ್ತಾ ಅವನ ಜೀವನಮಾರ್ಗವನ್ನು ಸಂಕುಚಿತಗೊಳಿಸಿದರೆ ನನ್ನ ರಬ್ಬ್ ನನ್ನನ್ನು ಅಪಮಾನಿಸಿದ್ದಾನೆ ಎಂದು ಅವನು ಹೇಳುತ್ತಾನೆ. ಖಂಡಿತ ಅಲ್ಲ.” (ಕುರ್‌ಆನ್ 89:15–17)

ತಾನು ತನ್ನ ದಾಸನನ್ನು ಗೌರವಿಸಿ ಅನುಗ್ರಹಗಳನ್ನು ನೀಡಿ ಜೀವನ ಮಾರ್ಗವನ್ನು ವಿಶಾಲಗೊಳಿಸುವ ಮೂಲಕ ಪರೀಕ್ಷಿಸುತ್ತೇನೆ ಮತ್ತು ಅವನ ಜೀವನ ಮಾರ್ಗವನ್ನು ಸಂಕುಚಿತಗೊಳಿಸುವ ಮೂಲಕವೂ ಪರೀಕ್ಷಿಸುತ್ತೇನೆ ಎಂದು ಅಲ್ಲಾಹು(ﷻ) ಹೇಳುತ್ತಿದ್ದಾನೆ. ಇವೆರಡೂ ಅವನ ಕಡೆಯ ಪರೀಕ್ಷೆಗಳಾಗಿವೆ.

ತಾನು ಜೀವನ ಮಾರ್ಗವನ್ನು ವಿಶಾಲಗೊಳಿಸುವುದು ದಾಸನನ್ನು ಗೌರವಿಸುವುದಕ್ಕೆ ಮತ್ತು ಜೀವನ ಮಾರ್ಗವನ್ನು ಸಂಕುಚಿತಗೊಳಿಸುವುದು ದಾಸನನ್ನು ಅಪಮಾನಿಸುವುದಕ್ಕೆ ಎಂದು ವಾದವನ್ನು ಅಲ್ಲಾಹು ಇಲ್ಲಿ ಖಂಡಿಸುತ್ತಾ ಹೇಳುತ್ತಾನೆ. “ಖಂಡಿತ ಅಲ್ಲ.” ಅಂದರೆ ವಿಷಯ ಮನುಷ್ಯನು ಹೇಳುವಂತೆ ಅಲ್ಲ. ಬದಲಾಗಿ ನಾನು ನನ್ನ ಅನುಗ್ರಹವನ್ನು ನೀಡುವ ಮೂಲಕ ಪರೀಕ್ಷಿಸುತ್ತೇನೆ ಮತ್ತು ಪರೀಕ್ಷೆಯ ಮೂಲಕ ಅನುಗ್ರಹವನ್ನೂ ನೀಡುತ್ತೇನೆ.”

ಇಬ್ನ್ ಉಸೈಮೀನ್(ರ) ಹೇಳುತ್ತಾರೆ:

“ಪರೀಕ್ಷೆ ಎಂದು ಪರಿಶೋಧನೆ. ಅಲ್ಲಾಹು(ﷻ) ಹೇಳುತ್ತಾನೆ.

﴿وَنَبۡلُوكُم بِٱلشَّرِّ وَٱلۡخَيۡرِ فِتۡنَةٗۖ وَإِلَيۡنَا تُرۡجَعُونَ ٣٥﴾

“ನಾವು ನಿಮ್ಮನ್ನು ಕೆಡುಕು ಮತ್ತು ಒಳಿತುಗಳ ಮೂಲಕ ಪರೀಕ್ಷಿಸುವೆವು. ನೀವು ನಮ್ಮ ಬಳಿಗೇ ಮರಳಿ ಬರುವಿರಿ.” (ಕುರ್‌ಆನ್ 21:35)

ಒಳಿತಿನ ಮೂಲಕ ಪರೀಕ್ಷಿಸುವುದು ಎಂದರೆ ದಾಸನು ಕೃತಜ್ಞತೆ ಸಲ್ಲಿಸುತ್ತಾನೋ ಅಥವಾ ಕೃತಘ್ನನಾಗಿ ಬಿಡುತ್ತಾನೋ ಎಂದು ಪರೀಕ್ಷಿಸುವುದು. ಸಬಅ್ ರಾಣಿಯ ಸಿಂಹಾಸನವು ತನ್ನ ಮುಂದೆ ಇಡಲಾಗಿರುವುದನ್ನು ಕಂಡಾಗ ಸುಲೈಮಾನ್(ಅ) ಹೇಳುತ್ತಾರೆ.

﴿قَالَ هَٰذَا مِن فَضۡلِ رَبِّي لِيَبۡلُوَنِيٓ ءَأَشۡكُرُ أَمۡ أَكۡفُرُۖ﴾

“ಅವರು ಹೇಳಿದರು: ಇದು ನನ್ನ ರಬ್ಬಿನ ಕಡೆಯ ಔದಾರ್ಯವಾಗಿದೆ. ನಾನು ಕೃತಜ್ಞತೆ ಸಲ್ಲಿಸುತ್ತೇನೋ ಅಥವಾ ಕೃತಘ್ನನಾಗಿ ಬಿಡುತ್ತೇನೋ ಎಂದು ನನ್ನನ್ನು ಪರೀಕ್ಷಿಸುವುದಕ್ಕಾಗಿ.” (ಕುರ್‌ಆನ್ 27:40)

ಇನ್ನು ಕೆಡುಕಿನ ಮೂಲಕ ಪರೀಕ್ಷಿಸುವುದು ಎಂದರೆ ಅಲ್ಲಾಹು ಕೆಡುಕನ್ನು ನೀಡಿ ಮನುಷ್ಯನನ್ನು ಪರೀಕ್ಷಿಸುತ್ತಾನೆ. ಅವನು ತಾಳ್ಮೆ ವಹಿಸುತ್ತಾನೋ ಅಥವಾ ಕೋಪಿಸಿಕೊಳ್ಳುತ್ತಾನೋ ಎಂದು ಅರಿಯುವುದಕ್ಕಾಗಿ. ಅವನು ತಾಳ್ಮೆ ವಹಿಸಿ ಅಲ್ಲಾಹನಿಂದ ಪ್ರತಿಫಲವನ್ನು ಆಶಿಸಿದರೆ ಈ ಪರೀಕ್ಷೆಯು ಅವನಿಗಿರುವ ಪ್ರಾಯಶ್ಚಿತ್ತವಾಗುತ್ತದೆ. ಹಾಗೆಯೇ ಅವನಿಗೆ ಉನ್ನತ ಪದವಿಗಳು ಸಿಗಲು ಕಾರಣವಾಗುತ್ತದೆ. ಇನ್ನು ಅವನು ತಾಳ್ಮೆ ವಹಿಸದಿದ್ದರೆ ಈ ಪರೀಕ್ಷೆಯು ಇಹಲೋಕ ಮತ್ತು ಪರಲೋಕದಲ್ಲಿ ಅವನ ಪಾಲಿಗೆ ಸಂಕಷ್ಟವಾಗಿ ಬಿಡುತ್ತದೆ.

ಅಲ್ಲಾಹು ಯಾರಿಗೆ ಆರ್ಥಿಕ, ದೈಹಿಕ, ಬೌದ್ಧಿಕ ಅನುಗ್ರಹಗಳನ್ನು ದಯಪಾಲಿಸಿ ಇಹಲೋಕದ ಅನುಗ್ರಹಗಳು ಅವನ ಪಾಲಿಗೆ ಒದಗಿ ಬಂದರೆ ಆ ಅನುಗ್ರಹಗಳಿಗಾಗಿ ಕೃತಜ್ಞತೆ ಸಲ್ಲಿಸುವುದು ಕಡ್ಡಾಯವಾಗಿದೆ.

ಹಾಗೆಯೇ ತನಗೆ ಅಲ್ಲಾಹು(ﷻ) ದಯಪಾಲಿಸಿದ ಈ ಅನುಗ್ರಹದ ಬೆಲೆಯನ್ನು ಅರಿಯುವುದಕ್ಕಾಗಿ ತನಗಿಂತ ಕೆಳಗಿನವರನ್ನು ನೋಡಬೇಕಾಗಿದೆ. ತನಗಿಂತ ಕೆಳಗಿನವರನ್ನು ನೋಡಿ ಅವರ ಸ್ಥಿತಿಗತಿಗಳ ಬಗ್ಗೆ ಅರಿಯುವಾಗ ತನಗೆ ಅಲ್ಲಾಹು ಎಷ್ಟೊಂದು ಅನುಗ್ರಹಗಳನ್ನು ದಯಪಾಲಿಸಿದ್ದಾನೆ ಎಂಬ ಅರಿವಾಗುತ್ತದೆ.

ದಾಸನು ಅಲ್ಲಾಹನ ಅನುಗ್ರಹಗಳಿಗೆ ಕೃತಜ್ಞತೆ ಸಲ್ಲಿಸಿದರೆ ತನ್ನ ಕಡ್ಡಾಯ ಕರ್ತವ್ಯವನ್ನು ನಿಭಾಯಿಸಿದ್ದಾನೆ ಮತ್ತು ಅದರ ಪ್ರತಿಫಲವನ್ನೂ ಪಡೆಯುತ್ತಾನೆ. ಮಾತ್ರವಲ್ಲ ಇನ್ನೂ ಹೆಚ್ಚು ಅನುಗ್ರಹಗಳನ್ನೂ ಪಡೆಯುತ್ತಾನೆ. ಏಕೆಂದರೆ ಅಲ್ಲಾಹು(ﷻ) ಹೇಳುತ್ತಾನೆ

﴿وَإِذۡ تَأَذَّنَ رَبُّكُمۡ لَئِن شَكَرۡتُمۡ لَأَزِيدَنَّكُمۡۖ وَلَئِن كَفَرۡتُمۡ إِنَّ عَذَابِي لَشَدِيدٞ ٧﴾

“ನೀವು ಕೃತಜ್ಞತೆ ಸಲ್ಲಿಸಿದರೆ ನಾನು ನಿಮಗೆ ಹೆಚ್ಚಿಸಿಕೊಡುತ್ತೇನೆ. ಇನ್ನು ನೀವು ಕೃತಘ್ನರಾದರೆ ನನ್ನ ಶಿಕ್ಷೆಯು ಬಹಳ ಕಠೋರವಾಗಿದೆ

*49 ನೇ ಪುಟಕ್ಕೆ*

# ಆ ದಿನ ದೂರವಿಲ್ಲ!

ಅಲ್ಪಾವಧಿಯ ಇಹಲೋಕ ಜೀವನಕ್ಕಿಂತ ಶಾಶ್ವತ ಹಾಗೂ ಜಯಾಪಜಯಗಳು ತೀರ್ಮಾನಿಸಲ್ಪಡುವ ಪರಲೋಕ ಜೀವನಕ್ಕಾಗಿ ಚೆನ್ನಾಗಿ ಸಿದ್ಧತೆ ಮಾಡಿಕೊಳ್ಳಬೇಕೆಂಬ ಪ್ರಜ್ಞೆಯು ಈ ಜೀವನವು ವ್ಯರ್ಥವಾಗಿ ಕಳೆಯಲು ಇರುವಂತಹದ್ದಲ್ಲ ಎಂಬ ತಿಳುವಳಿಕೆಯೆಡೆಗೆ ನಮ್ಮನ್ನು ಕೊಂಡೊಯ್ಯುತ್ತದೆ. ಒಳಿತುಗಳನ್ನು ತಿಳಿದುಕೊಂಡು ಪ್ರತಿಯೊಂದು ಒಳಿತು ನೈಜ ವಿಜಯದೆಡೆಗಿನ ಹೆಜ್ಜೆಯಾಗಿದೆಯೆಂದು ನೆನಪಿಟ್ಟುಕೊಂಡು, ಕೆಡುಕುಗಳು ಒಳಿತನ್ನು ನಿರ್ವೀರ್ಯಗೊಳಿಸುವ ಕಾರ್ಯವಾಗಿದೆಯೆಂದು ಅರಿತು ಎಲ್ಲಾ ವಿಧದ ಕೆಡುಕುಗಳಿಂದ ದೂರವಿರಲು ನಮಗೆ ಸಾಧ್ಯವಾಗಬೇಕು.

ಸೃಷ್ಟಿಕರ್ತನು ನಮ್ಮನ್ನು ನಿರರ್ಥಕವಾಗಿ ಸೃಷ್ಟಿಸಿಲ್ಲ. ಈ ಲೋಕದಲ್ಲಿ ನಾವು ಶಾಶ್ವತರೂ ಅಲ್ಲ.

ಅಲ್ಲಾಹನು ಹೇಳುತ್ತಾನೆ:

﴿ أَفَحَسِبْتُمْ أَنَّمَا خَلَقْنَاكُمْ عَبَثًا وَأَنَّكُمْ إِلَيْنَا لَا تُرْجَعُونَ ﴿١١٥﴾ ﴾

“ನಾವು ನಿಮ್ಮನ್ನು ನಿರರ್ಥಕವಾಗಿ ಸೃಷ್ಟಿಸಿದ್ದೇವೆಂದೂ ನಿಮಗೆ ನಮ್ಮ ಕಡೆಗೆ ಮರಳಲಿಕ್ಕೆ ಇಲ್ಲವೆಂದೂ ತಿಳಿದುಕೊಂಡಿದ್ದೀರಾ?” (ಕುರ್‌ಆನ್ 23:115)

ಈ ಜೀವನವು ಇಹಲೋಕದ ಆಸ್ವಾದನೆಗಳಲ್ಲಿ ಮುಳುಗಿ ವ್ಯರ್ಥವಾಗಿ ಕಳೆಯಲು ಇರುವಂತಹದ್ದಲ್ಲ. ಸೃಷ್ಟಿಕರ್ತನ ಪ್ರತಿಫಲವನ್ನು ಹಂಬಲಿಸಿ ಅವನ ಆದೇಶವನ್ನು ಪಾಲಿಸಿ ಅವನ ಶಿಕ್ಷೆಯನ್ನು ಭಯಪಟ್ಟು ಜೀವಿಸಲೇಬೇಕಾಗಿದೆ.

ಮನುಷ್ಯನು ಸನ್ಮಾರ್ಗದಲ್ಲಿ ಜೀವಿಸಬೇಕಾಗಿದೆ. ಸನ್ಮಾರ್ಗ ಒಂದೇ ಇದೆ. ಅದುವೇ ‘ಸಿರಾತುಲ್ ಮುಸ್ತಖೀಮ್’. ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯನ್ನು ಸ್ವಹಾಬಿಗಳು ಮತ್ತು ತಾಬಿಉತ್ತಾಬಿಈನ್‌ಗಳು ತಿಳಿದುಕೊಂಡ ರೀತಿಯಲ್ಲಿ ತಿಳಿದುಕೊಂಡು ಅದನ್ನು ಪ್ರಾಮಾಣಿಕವಾಗಿ ಅನುಗಮಿಸುವವರಿಗೆ ಮಾತ್ರ ಸಿರಾತುಲ್ ಮುಸ್ತಖೀಮ್‌ನಲ್ಲಿ ನಡೆಯಲು ಸಾಧ್ಯ.

ಅಲ್ಲಾಹು ಹೇಳುತ್ತಾನೆ.

﴿ وَمَن يُشَاقِقِ ٱلرَّسُولَ مِنۢ بَعْدِ مَا تَبَيَّنَ لَهُ ٱلْهُدَىٰ وَيَتَّبِعْ غَيْرَ سَبِيلِ ٱلْمُؤْمِنِينَ نُوَلِّهِۦ مَا تَوَلَّىٰ وَنُصْلِهِۦ جَهَنَّمَ ۖ وَسَآءَتْ مَصِيرًا ﴿١١٥﴾ ﴾

“ಸನ್ಮಾರ್ಗವು ವ್ಯಕ್ತವಾದ ಬಳಿಕವೂ ಸಂದೇಶವಾಹಕರ ವಿರುದ್ಧ ಟೊಂಕ ಕಟ್ಟಿಕೊಂಡವನನ್ನೂ ಸತ್ಯವಿಶ್ವಾಸಿಗಳ ಮಾರ್ಗದ ಹೊರತು ಅನ್ಯ ಮಾರ್ಗದಲ್ಲಿ ನಡೆಯುವವನನ್ನೂ ಅವನು ತಾನಾಗಿ ತಿರುಗಿಕೊಂಡ ಕಡೆಗೇ ನಾವು ತಿರುಗಿಸಿ ಬಿಡುವೆವು ಮತ್ತು ಅವನನ್ನು ಅತ್ಯಂತ ನಿಕೃಷ್ಟ ಸ್ಥಾನವಾಗಿರುವ ನರಕಕ್ಕೆ ತಳ್ಳಿಬಿಡುವೆವು.” (4:115)

ಒಬ್ಬ ಸತ್ಯವಿಶ್ವಾಸಿ ಒಳಿತನ್ನು ಬೆಳೆಸಲು, ಪುಣ್ಯವನ್ನು ಜೀವಂತಗೊಳಿಸಲು, ಕೆಡುಕನ್ನು ದಮನಿಸಲು, ಪಾಪವನ್ನು ತಡೆಯಲು ಪ್ರಯತ್ನಿಸಬೇಕಾಗಿದೆ.

ಅಲ್ಲಾಹನು ಹೇಳುತ್ತಾನೆ.

﴿وَتَعَاوَنُواْ عَلَى ٱلۡبِرِّ وَٱلتَّقۡوَىٰۖ وَلَا تَعَاوَنُواْ عَلَى ٱلۡإِثۡمِ وَٱلۡعُدۡوَٰنِۚ﴾

“ಪುಣ್ಯ ಹಾಗೂ ದೇವಭಯದ ಕಾರ್ಯದಲ್ಲಿ ಎಲ್ಲರ ಜೊತೆ ಸಹಕರಿಸಿರಿ ಮತ್ತು ಪಾಪ ಹಾಗೂ ಅತಿರೇಕದ ಕಾರ್ಯಗಳಲ್ಲಿ ಯಾರೊಂದಿಗೂ ಸಹಕರಿಸಬೇಡಿರಿ.” (5:2)

ಒಳಿತು ಮಾಡುವುದು ಮತ್ತು ಒಳಿತಿನಲ್ಲಿ ಸಹಕರಿಸುವುದು ಅಲ್ಲಾಹ್ ಮತ್ತು ಅವನ ದಾಸರೊಂದಿಗಿರುವ ಬಾಧ್ಯತೆಯ ನಿರ್ವಹಣೆಯಾಗಿದೆ. ನಾವು ಸಕಲ ಕೆಡುಕುಗಳು ವಿಜೃಂಭಿಸುವ ಕಾಲಘಟ್ಟದಲ್ಲಿ ಜೀವಿಸುತ್ತಿದ್ದೇವೆ. ಇಂತಹ ಸಂದರ್ಭದಲ್ಲಿ ಅವುಗಳಿಗೆ ಬಲಿಯಾಗದೆ ಜೀವಿಸುವುದು ಚಿಕ್ಕ ಕಾರ್ಯವಲ್ಲ.

ಸದ್ವರ್ತನೆಗಳನ್ನು ತಡೆಯಲು ಹಾಗೂ ದುಷ್ಟ ಕರ್ಮಗಳ ಬೀಜ ಬಿತ್ತಲು ರಹಸ್ಯ ಕಾರ್ಯಾಚರಣೆ ಮತ್ತು ಗೂಢಾಲೋಚನೆಯಲ್ಲಿ ನಿರತರಾದವರ ಜೊತೆಯಲ್ಲಿ ಸತ್ಯವಿಶ್ವಾಸಿಗಳು ಯಾವತ್ತೂ ಸೇರಬಾರದು.

ಅಲ್ಲಾಹು ಹೇಳುತ್ತಾನೆ:

﴿يَٰٓأَيُّهَا ٱلَّذِينَ ءَامَنُوٓاْ إِذَا تَنَٰجَيۡتُمۡ فَلَا تَتَنَٰجَوۡاْ بِٱلۡإِثۡمِ وَٱلۡعُدۡوَٰنِ وَمَعۡصِيَتِ ٱلرَّسُولِ وَتَنَٰجَوۡاْ بِٱلۡبِرِّ وَٱلتَّقۡوَىٰۖ وَٱتَّقُواْ ٱللَّهَ ٱلَّذِيٓ إِلَيۡهِ تُحۡشَرُونَ ٩﴾

“ಸತ್ಯವಿಶ್ವಾಸಿಗಳೇ, ನೀವು ಪರಸ್ಪರ ರಹಸ್ಯ ಮಾತುಗಳನ್ನಾಡುವಾಗ ಪಾಪ, ಅತಿಕ್ರಮ ಮತ್ತು ಸಂದೇಶವಾಹಕರನ್ನು ಧಿಕ್ಕರಿಸುವ ಮಾತುಗಳನ್ನಾಡಬೇಡಿರಿ. ಪುಣ್ಯ ಹಾಗೂ ಧರ್ಮನಿಷ್ಠೆಯ ಮಾತುಗಳನ್ನಾಡಿರಿ ಮತ್ತು ನಿಮ್ಮನ್ನು ಒಟ್ಟುಗೂಡಿಸಲ್ಪಡುವ ದಿನ ನೀವು ಯಾರ ಮುಂದೆ ಹಾಜರಾಗಲಿಕ್ಕಿದೆಯೋ ಆ ಅಲ್ಲಾಹನನ್ನು ಭಯಪಡಿರಿ.” (58:9)

ಕೆಲವರಿಗೆ ದೇಹೇಚ್ಛೆಗಳನ್ನು ಅನುಸರಿಸುವ, ಭೌತಿಕತೆಯಲ್ಲಿ ಮೈಮರೆಯುವ, ಸತ್ಯವನ್ನು ಕಡೆಗಣಿಸಿ ಜೀವಿಸುವುದರಲ್ಲಿ ಹೆಚ್ಚಿನ ಆಸಕ್ತಿ ಇರುತ್ತದೆ. ಅಲ್ಲಾಹನು ಹೇಳುತ್ತಾನೆ.

﴿فَإِن لَّمۡ يَسۡتَجِيبُواْ لَكَ فَٱعۡلَمۡ أَنَّمَا يَتَّبِعُونَ أَهۡوَآءَهُمۡۚ وَمَنۡ أَضَلُّ مِمَّنِ ٱتَّبَعَ هَوَىٰهُ بِغَيۡرِ هُدٗى مِّنَ ٱللَّهِۚ إِنَّ ٱللَّهَ لَا يَهۡدِي ٱلۡقَوۡمَ ٱلظَّٰلِمِينَ ٥٠﴾

“ಇನ್ನು ಅವರು ನಿಮ್ಮ ಬೇಡಿಕೆಗಳನ್ನು ಪೂರ್ತಿಗೊಳಿಸದಿದ್ದರೆ ವಾಸ್ತವದಲ್ಲಿ ಅವರು ತಮ್ಮ ಸ್ವೇಚ್ಛೆಗಳ ದಾಸರಾಗಿದ್ದಾರೆಂದು ತಿಳಿದುಕೊಳ್ಳಿರಿ. ದೇವಮಾರ್ಗದರ್ಶನದ ಹೊರತು ಕೇವಲ ತನ್ನ ಸ್ವೇಚ್ಛೆಗಳನ್ನು ಅನುಸರಿಸುವವನಿಗಿಂತ ದಾರಿಗೆಟ್ಟವನು ಇನ್ನಾರಿರಬಹುದು? ಅಲ್ಲಾಹನು ಇಂತಹ ಅಕ್ರಮಿಗಳಿಗೆ ಎಷ್ಟು ಮಾತ್ರಕ್ಕೂ ಸನ್ಮಾರ್ಗದರ್ಶನ ಮಾಡಿಸುವುದಿಲ್ಲ.” (28:50)

ಇಹಲೋಕಕ್ಕಾಗಿ ಪೈಪೋಟಿಯಲ್ಲಿ ಏರ್ಪಟ್ಟವರು ಕೊನೆಗೆ ನಷ್ಟವನ್ನು ನೆನೆಸಿಕೊಂಡು ಸಂಕಟಪಡಬೇಕಾದ ದುರ್ಗತಿ ಬಂದೊದಗುವುದರಲ್ಲಿ ಸಂಶಯವಿಲ್ಲ.

ಸತ್ಯದೊಂದಿಗೆ ನಕರಾತ್ಮಕ ನಿಲುವನ್ನಿಟ್ಟುಕೊಂಡು ಅದನ್ನು ಅವಹೇಳನ ಮಾಡಿ ಇತರರನ್ನು ಅದಕ್ಕಾಗಿ ಪ್ರೇರೇಪಿಸುವ ದುಷ್ಟರೂ ಇದ್ದಾರೆ. ಅಂತಹವರು ಜಾಗೃತರಾಗಲಿ ಎಂಬ ಎಚ್ಚರಿಕೆಯನ್ನು ಕುರ್‌ಆನ್ ನೀಡಿದೆ. ಸತ್ಯವಿಶ್ವಾಸಿಗಳು ಅವರ ವಂಚನೆಗೆ ಸಿಲುಕಬಾರದು.

ಅಲ್ಲಾಹು ಹೇಳುತ್ತಾನೆ.

﴿وَإِذَا رَأَيۡتَ ٱلَّذِينَ يَخُوضُونَ فِيٓ ءَايَٰتِنَا فَأَعۡرِضۡ عَنۡهُمۡ حَتَّىٰ يَخُوضُواْ فِي حَدِيثٍ غَيۡرِهِۦۚ وَإِمَّا يُنسِيَنَّكَ ٱلشَّيۡطَٰنُ فَلَا تَقۡعُدۡ بَعۡدَ ٱلذِّكۡرَىٰ مَعَ ٱلۡقَوۡمِ ٱلظَّٰلِمِينَ ٦٨﴾

“ಜನರು ನಮ್ಮ ವಚನಗಳಲ್ಲಿ ದೋಷಾನ್ವೇಷಣೆ ಮಾಡುತ್ತಿರುವುದನ್ನು ನೀವು ಕಂಡಾಗ ಅವರು ಈ ಮಾತುಕತೆಯನ್ನು ಬಿಟ್ಟು ಬೇರೆ ಮಾತುಗಳಲ್ಲಿ ತೊಡಗುವವರೆಗೂ ಅವರ ಬಳಿಯಿಂದ ದೂರ ಸರಿಯಿರಿ. ಒಂದು ವೇಳೆ ಶೈತಾನನು ನಿಮ್ಮನ್ನು ಮರೆವಿಗೆ ಒಳಪಡಿಸಿದರೆ ನಿಮಗೆ ಈ ಪ್ರಮಾದ ಮನವರಿಕೆಯಾದ ಬಳಿಕ ಪುನಃ ಇಂತಹ ಅಕ್ರಮಿಗಳ ಹತ್ತಿರ ಕುಳಿತುಕೊಳ್ಳಬೇಡಿರಿ.” (6:68)

ಸತ್ಯದ ವಿರುದ್ಧ ಮಾತನಾಡುವುದು, ನಿರರ್ಥಕ ವಾದಗಳನ್ನು ಚೆಂದವಾಗಿ ಪ್ರಸ್ತುತಪಡಿಸುವುದು, ಅದರೆಡೆಗೆ ಆಮಂತ್ರಿಸುವುದು,

ಅದರ ವಕ್ತಾರರನ್ನು ಪ್ರಶಂಸಿಸುವುದು ಇವೆಲ್ಲವೂ ಅವಹೇಳನದ ತಾತ್ಪರ್ಯವಾಗಿದೆ.

ಆಪ್ತಮಿತ್ರರು, ನಿಕಟ ಸಂಬಂಧಿಕರು, ಸಹೋದ್ಯೋಗಿಗಳು... ಹೀಗೆ ಹಲವರು ಕೆಲವೊಮ್ಮೆ ಸತ್ಯಕ್ಕೆ ಬೆನ್ನು ತಿರುಗಿಸಲು ಕಾರಣಕರ್ತರಾಗುವುದಿದೆ. ಅವರನ್ನು ಅನುಸರಿಸದಿರಲು ನಿರ್ವಾಹವಿಲ್ಲ ಎಂದು ಹೇಳಿ ತಪ್ಪಾದ ದಾರಿಯಲ್ಲಿ ಸಂಚರಿಸುವವರು ತಿಳಿದಿರಬೇಕಾದ ಒಂದು ಸತ್ಯವಿದೆ. ಪರಲೋಕಕ್ಕೆ ತಲುಪಿದ ನಂತರ ನನ್ನನ್ನು ಇಂತಹ ವ್ಯಕ್ತಿ ಪಥಭ್ರಷ್ಟಗೊಳಿಸಿದ್ದಾನೆಂದು ರೋದಿಸಿದರೆ ಪ್ರಯೋಜನವಾಗದು.

ವದಂತಿ ಮತ್ತು ಊಹಾಪೋಹಗಳ ಹಿಂದೆ ಹೋಗಿ ದಾರಿ ತಪ್ಪುವವರಿಗೆ ಅಲ್ಲಾಹನು ಎಚ್ಚರಿಕೆ ನೀಡಿದ್ದಾನೆ.

﴿ وَلَا تَقْفُ مَا لَيْسَ لَكَ بِهِۦ عِلْمٌ ۚ إِنَّ ٱلسَّمْعَ وَٱلْبَصَرَ وَٱلْفُؤَادَ كُلُّ أُو۟لَٰٓئِكَ كَانَ عَنْهُ مَسْـُٔولًا ﴿٣٦﴾ ﴾

“ನಿಮಗೆ ಜ್ಞಾನವಿಲ್ಲದಂತಹ ವಸ್ತುಗಳನ್ನು ಬೆಂಬತ್ತಬೇಡಿರಿ. ನಿಶ್ಚಯವಾಗಿಯೂ ಶ್ರವಣ, ದೃಷ್ಟಿ ಮತ್ತು ಮನಸ್ಸು ಇವೆಲ್ಲವುಗಳ ವಿಚಾರಣೆ ನಡೆಯಲಿದೆ.” (17:36)

ಅಲ್ಲಾಹನು ಯಾರಿಗೆ ಹೃದಯ ವೈಶಾಲ್ಯತೆಯನ್ನು ಅನುಗ್ರಹಿಸಿದ್ದಾನೋ ಅವನು ಸೌಭಾಗ್ಯವಂತನಾಗಿದ್ದಾನೆ. ಅಲ್ಲಾಹನು ಹೇಳುವುದನ್ನು ನೋಡಿರಿ.

﴿ أَفَمَن شَرَحَ ٱللَّهُ صَدْرَهُۥ لِلْإِسْلَٰمِ فَهُوَ عَلَىٰ نُورٍ مِّن رَّبِّهِۦ ۚ فَوَيْلٌ لِّلْقَٰسِيَةِ قُلُوبُهُم مِّن ذِكْرِ ٱللَّهِ ۚ أُو۟لَٰٓئِكَ فِى ضَلَٰلٍ مُّبِينٍ ﴿٢٢﴾ ﴾

“ಅಲ್ಲಾಹನು ಯಾರ ಹೃದಯವನ್ನು ಇಸ್ಲಾಮಿಗಾಗಿ ತೆರೆದುಬಿಟ್ಟನೋ ಹಾಗೂ ಯಾರು ತನ್ನ ಪ್ರಭುವಿನ ಕಡೆಯಿಂದ ಒಂದು ಪ್ರಕಾಶದಲ್ಲಿ ನಡೆಯುತ್ತಿರುವನೋ ಅವನು (ಇವುಗಳಿಂದ ಯಾವ ಪಾಠವನ್ನೂ ಕಲಿಯದವನಂತೆ ಆಗಬಲ್ಲನೇ?) ಯಾರ ಹೃದಯಗಳು ಅಲ್ಲಾಹನ ಬೋಧನೆಯಿಂದ ಇನ್ನಷ್ಟು ಕಠಿಣವಾಗಿ ಹೋದುವೋ ಅವರಿಗೆ ವಿನಾಶವಿದೆ. ಅವರು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಬಿದ್ದಿರುತ್ತಾರೆ.” (39:22)

ಅಲ್ಲಾಹನ ವಿಧಿಗಳನ್ನು ಸ್ವೀಕರಿಸಿ ಅದರ ಪ್ರಕಾರ ಕಾರ್ಯವೆಸಗಿ ಸಂತೃಪ್ತಿ ಹಾಗೂ ಅಂತರ್ ದೃಷ್ಟಿ ಇರುವವರಾಗುವುದು ಹೃದಯ ವೈಶಾಲ್ಯತೆಯ ತಿರುಳಾಗಿದೆ. ಅಲ್ಲಾಹನ ಗ್ರಂಥಕ್ಕೆ ನಿಕಟರಾಗದೆ ವಿಮುಖರಾಗುವವರು ಹಾಗೂ ಅದರ ಮೂಲಕ ಶಾಂತಿಯನ್ನು ಹಂಬಲಿಸದವರ ಹೃದಯವು ಕಠಿಣವಾಗಿರುತ್ತದೆ.

ಮರಳುವಿಕೆ ಅಲ್ಲಾಹನೆಡೆಗೇ ಆಗಿದೆ. ಆದುದರಿಂದ ಈ ಮರಳುವಿಕೆ ಅತ್ಯುತ್ತಮ ನೆಲೆಯಲ್ಲಾಗಿರಬೇಕು. ಒಡಹುಟ್ಟಿದವರು, ಮಿತ್ರರು, ಸಂಬಂಧಿಕರು, ನಾಯಕರು, ಅನುಯಾಯಿಗಳು.. ಇವರು ಯಾರೂ ಸಹಾಯ ಮಾಡಲಾಗದಂತಹ ಒಂದು ದಿನವು ಬರಲಿಕ್ಕಿದೆ. ಆ ದಿನವು ಬಹಳ ದೂರವಿಲ್ಲವೆಂದು ತಿಳಿದುಕೊಳ್ಳಬೇಕು.

ಅಲ್ಲಾಹನು ಹೇಳುತ್ತಾನೆ:

﴿ وَٱتَّقُوا۟ يَوْمًا تُرْجَعُونَ فِيهِ إِلَى ٱللَّهِ ۖ ثُمَّ تُوَفَّىٰ كُلُّ نَفْسٍ مَّا كَسَبَتْ وَهُمْ لَا يُظْلَمُونَ ﴿٢٨١﴾ ﴾

“ನೀವು ಅಲ್ಲಾಹನ ಕಡೆಗೆ ಮರಳಿಸಲ್ಪಡುವ ದಿನದ ಅವಮಾನ ಹಾಗೂ ಕಷ್ಟಗಳಿಂದ ಭಯಪಡಿರಿ. ಅಲ್ಲಿ ಪ್ರತಿಯೊಬ್ಬನಿಗೂ ಅವನು ಗಳಿಸಿದ ಪುಣ್ಯ ಅಥವಾ ಪಾಪಗಳ ಸಂಪೂರ್ಣ ಪ್ರತಿಫಲ ಸಿಗುವುದು ಮತ್ತು ಯಾರ ಮೇಲೂ ಎಷ್ಟು ಮಾತ್ರಕ್ಕೂ ಅನ್ಯಾಯವಾಗಲಾರದು.” (2:281)

﴿ إِنَّ ٱللَّهَ لَا يَظْلِمُ مِثْقَالَ ذَرَّةٍ ۖ وَإِن تَكُ حَسَنَةً يُضَٰعِفْهَا وَيُؤْتِ مِن لَّدُنْهُ أَجْرًا عَظِيمًا ﴿٤٠﴾ ﴾

“ಅಲ್ಲಾಹನು ಯಾರ ಮೇಲೂ ಕಿಂಚಿತ್ತೂ ಅನ್ಯಾಯವೆಸಗುವುದಿಲ್ಲ. ಯಾರಾದರೂ ಒಂದು ಪುಣ್ಯ ಕಾರ್ಯ ಮಾಡಿದರೆ ಅದನ್ನು ಅಲ್ಲಾಹನು ಹಲವು ಪಟ್ಟು ವರ್ಧಿಸುತ್ತಾನೆ. ಮತ್ತು ತನ್ನ ಕಡೆಯಿಂದಲೂ ಹೇರಳ ಪ್ರತಿಫಲ ಪ್ರದಾನ ಮಾಡುತ್ತಾನೆ.” (4:40)

ಚಿಕ್ಕ ಮತ್ತು ದೊಡ್ಡದಾದ ಕರ್ಮಗಳನ್ನೊಳಗೊಂಡಿರುವ ನಮ್ಮ ದಾಖಲೆಗಳ ಸಮ್ಮುಖದಲ್ಲಿ ನಾವು ವಿಚಾರಣೆಗೆ ಒಳಪಡಲಿದ್ದೇವೆ. ಈ ವಿಚಾರಣೆ ಮತ್ತು ನಂತರದ ತೀರ್ಪಿನಲ್ಲಿ ಕಿಂಚಿತ್ತೂ ಅನ್ಯಾಯವಾಗದು. ಅಲ್ಲಿ ಯಶಸ್ವಿಯಾಗಬೇಕೆನ್ನುವದು ಇರಲೋಕ ಜೀವನದ ಗುರಿಯಾಗಬೇಕು. ■

ಜೀವನದ ಸವಿ

# ಅನುಭವಿಸಿರಿ

## ವಾಸ್ತವ

ಡಾ. ಮುಹಮ್ಮದ್ ಅಬ್ದುರ್ರಹ್ಮಾನ್ ಅರೀಫಿ

ನಾನು ಪರೀಕ್ಷಾ ಕೊಠಡಿಯಲ್ಲಿ ಮೇಲ್ವಿಚಾರಣೆಯ ಕರ್ತವ್ಯ ನಿರ್ವಹಿಸುತ್ತಿದ್ದೆ. ಅಂದು ಗುರವಾರ ಈ ದಿನ ಬಹುತೇಕ ನಮ್ಮಲ್ಲಿ (ಸೌದಿ ಅರೇಬಿಯಾ) ವಾರದ ರಜೆ ಇರುತ್ತದೆ. ನಾವು ಪಠ್ಯಗಳು ಬಹಳ ಹೆಚ್ಚಿರುವುದರಿಂದ ರಜೆಯ ದಿನದಲ್ಲಿ ಕೂಡಾ ಪರೀಕ್ಷೆ ನಡೆಸಲು ನಿರ್ಬಂಧಿತರಾಗಿದ್ದೆವು.

ಪರೀಕ್ಷೆ ಪ್ರಾರಂಭವಾಗಿ ಸ್ವಲ್ಪ ಸಮಯವೇ ಆಗಿತ್ತು ಓರ್ವ ವಿದ್ಯಾರ್ಥಿ ತಡವಾಗಿ ಬಂದು ಪರೀಕ್ಷಾ ಕೊಠಡಿಯನ್ನು ಪ್ರವೇಶಿಸಿದ. ಅವನ ಮುಖದಲ್ಲಿ ಆತಂಕದ ಛಾಯೆಯಿತ್ತು. ನಾನು ಅವನೊಂದಿಗೆ ಹೇಳಿದೆ. “ಕ್ಷಮಿಸಿ. ತಾವು ತಡವಾಗಿ ಬಂದಿದ್ದೀರಿ ನಾನು ನಿಮಗೆ ಪರೀಕ್ಷೆ ಬರೆಯಲು ಅನುಮತಿ ಕೊಡಲು ಸಾಧ್ಯವಿಲ್ಲ.” ಅವನು ವಿನಂತಿಸತೊಡಗಿದ. ನಾನು ಕೇಳಿದೆ. “ತಡವಾಗಿದ್ದೇಕೆ?” ಅವನು ಬಹಳ ಸ್ಪಷ್ಟವಾದ ಮಾತುಗಳಿಂದ ಹೇಳಿದ. “ಅಲ್ಲಾಹನಾಣೆ! ಮಹಾಶಯರೇ! ನಾನು ನಿದ್ರಿಸಿಬಿಟ್ಟೆ.” ನನಗೆ ಅವನು ಸತ್ಯ ಹೇಳಿದ್ದು ನೋಡಿ ಸಂತಸವಾಯಿತು. ನಾನು ಅವನಿಗೆ ಪರೀಕ್ಷೆ ಬರೆಯಲು ಅನುಮತಿ ನೀಡಿದೆ.

ಕೆಲವು ನಿಮಿಷಗಳ ನಂತರ ಇನ್ನೊಬ್ಬ ವಿದ್ಯಾರ್ಥಿ ಬಂದ. ನಾನು ಕೇಳಿದೆ. “ನೀವೇಕೆ ಇಷ್ಟು ತಡವಾಗಿ ಬಂದಿದ್ದು?” ಅವನು ಸುಳ್ಳು ಹೇಳಿದ. “ಮಹಾಶಯರೇ! ಅಲ್ಲಾಹನಾಣೆ! ರಸ್ತೆಯಲ್ಲಿ ತುಂಬಾ ವಾಹನಗಳು, ಟ್ರಾಫಿಕ್ ಜಾಮ್ ಆಗಿತ್ತು. ಬೆಳಿಗ್ಗೆ ಪೂರ್ವಾಹ್ನದ ಸಮಯದಲ್ಲಿ ಜನರು ಅವರ ಕೆಲಸ ಕಾರ್ಯಗಳಿಗಾಗಿ ಹೊರಡುತ್ತಾರೆ. ಒಬ್ಬರು ಯೂನಿರ್ಸಿಟಿಗೆ ಹೊರಟರೆ ಇನ್ನೊಬ್ಬರು ಕಛೇರಿಗೆ ಹೊರಡುತ್ತಾರೆ. ನೀವು ತಿಳಿದವರೇ ಆಗಿದ್ದೀರಿ.”

ಅವನು ನನ್ನನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಆದರೆ ಇಂದು ವಾರದ ರಜಾದಿನವೆನ್ನುವುದನ್ನು ಅವನು ಮರೆತಿದ್ದ. ರಜೆಯ ದಿನ ರಸ್ತೆಯಲ್ಲಿ ಯಾವುದೇ ಅಡಚಣೆಗಳಿರುವುದಿಲ್ಲ. ನಾನು ಕೇಳಿದೆ. “ನೀವು ರಸ್ತೆಯಲ್ಲಿ ಜನಜಂಗುಳಿಯಿದ್ದು ಟ್ರಾಫಿಕ್ ಜಾಮ್ ಆಗಿದೆಯೆಂದು ಹೇಳುತ್ತಿದ್ದೀರಾ!” ಅವನು ಹೇಳಿದ. “ಹೌದು! ಹೌದು! ತಾವು ನನ್ನ ಜೊತೆಗೇ ಇದ್ದಿರೋ ಎಂದೆನಿಸುತ್ತಾ ಇದೆ ನನಗೆ. ಮಾಶಾ ಅಲ್ಲಾಹ್!” ನಾನು ಕೃತಕ ಕೋಪ ಪ್ರಕಟಿಸು-ತ್ತಾ ಹೇಳಿದೆ. “ಏಯ್ ಸುಳ್ಳುಗಾರ! ಸುಳ್ಳು ಸೃಷ್ಟಿಸುವುದಕ್ಕಿಂತ ಮೊದಲು ಸ್ವಲ್ಪ ಆಲೋಚನೆ ಮಾಡಿಕೋ. ಇಂದು ಗುರುವಾರ ನೊಕರರಿಗೆ ಮತ್ತು ವಿದ್ಯಾರ್ಥಿಗಳಿಗೆ ರಜೆ. ಹಾಗಿರುವಾಗ ರಸ್ತೆ ನಿಬಿಡವಾಗುವುದು ಹೇಗೆ?”

ಕಳ್ಳತನ ಬಹಿರಂಗವಾದಾಗ ಅವನು ಗಾಬರಿಗೊಂಡ. ನಂತರ ಮಾತಿನ ಧಾಟಿ ಬದಲಿಸುತ್ತಾ ಹೇಳಿದ. “ಓಹ್! ಮಹಾಶಯರೇ ನಾನು ಮರೆತೇ ಬಿಟ್ಟಿದ್ದೆ. ವಾಸ್ತವದಲ್ಲಿ ನನ್ನ ವಾಹನದ ಟೈರ್ ಪಂಕ್ಚರ್ ಆಗಿತ್ತು. ಅದನ್ನು ಬದಲಿಸಿಕೊಂಡು ಬರಲು ತಡವಾಯಿತು. ಆ ಬಡಪಾಯಿ ಸುಳ್ಳು ಹೇಳಿ ಸಿಕ್ಕಿಹಾಕಿಕೊಂಡಿದ್ದ. ನಾನು ನಸುನಕ್ಕು ಅವನಿಗೆ ಪರೀಕ್ಷೆ ಬರೆಯಲು ಅನುಮತಿಸಿದೆ.”

ನೀವು ಜನರೊಂದಿಗೆ ಹೇಳುವುದು ಸುಳ್ಳೆಂದು ಜನರಿಗೆ ತಿಳಿದುಹೋದರೆ ಎಷ್ಟು ಮುಜುಗರವಾಗುತ್ತದೆ ಅಲ್ಲವಾ? ಸುಳ್ಳು ಜನರು ನಿಮ್ಮ ಮೇಲಿನ ವಿಶ್ವಾಸ ಕಳೆದುಕೊಳ್ಳುವಂತೆ ಮಾಡುತ್ತದೆ. ಅವರು ನಿಮ್ಮ ಮುಂದೆ ದೂರಿಕೊಳ್ಳುವುದಿಲ್ಲ. ಆದರೆ ನೀವು ಮಾತಾಡುವಾಗ ಅವರು ಗಮನಿಸುವುದೂ ಇಲ್ಲ. ಇನ್ನು ಗಮನಿಸಿದರೂ ಅದನ್ನು ಅವರು ನಂಬುವುದಿಲ್ಲ.

ಸುಳ್ಳು ಒಂದು ದೊಡ್ಡ ಕೆಡುಕಾಗಿದೆ. ಪ್ರವಾದಿ(ﷺ) ಹೇಳುತ್ತಾರೆ:

“ಸತ್ಯವಿಶ್ವಾಸಿಗಳಲ್ಲಿ ಎಲ್ಲಾ ಗುಣಗಳೂ ಇರಬಹುದು. ಆದರೆ ವಂಚನೆ ಮತ್ತು ಸುಳ್ಳಿನ ಹೊರತು.” (ಮುಸ್ನದ್ ಅಹ್ಮದ್ 5/252)

ಪ್ರವಾದಿ(ﷺ) ರೊಂದಿಗೆ ಕೇಳಲಾಯಿತು. “ಅಲ್ಲಾಹನ ಸಂದೇಶವಾಹಕರೇ! ಓರ್ವ ಸತ್ಯವಿಶ್ವಾಸಿ ಹೇಡಿಯಾಗಬಲ್ಲನೇ?” ಪ್ರವಾದಿ (ﷺ) ಉತ್ತರಿಸಿದರು. “ಆಗಲೂಬಹುದು.”

“ಸತ್ಯವಿಶ್ವಾಸಿ ಜಿಪುಣನಾಗಬಲ್ಲನೇ?”

“ಆಗಲೂಬಹುದು.”

“ಸತ್ಯವಿಶ್ವಾಸಿ ಸುಳ್ಳನಾಗಬಹುದೇ?” ಪ್ರವಾದಿ(ﷺ) ಹೇಳಿದರು. “ಎಂದಿಗೂ ಇಲ್ಲ.” (ಮುವತ್ತ ಇಮಾಮ್ ಮಾಲಿಕ್ 2/990)

ಅಬ್ದುಲ್ಲ ಬಿನ್ ಆಮಿರ್(ؓ) ವರದಿ ಮಾಡುತ್ತಾರೆ. ಒಂದು ದಿನ ಪ್ರವಾದಿ(ﷺ) ರವರು ನಮ್ಮ ಮನೆಗೆ ಬಂದಿದ್ದರು. ಆಗ ನನ್ನ ತಾಯಿ ನನ್ನನ್ನು ಕೂಗುತ್ತಾ ಹೇಳಿದರು. “ಇಲ್ಲಿ ಬಾ! ನಾನು ನಿನಗೆ ಒಂದು ವಸ್ತು ಕೊಡುತ್ತೇನೆ.”

ಪ್ರವಾದಿ(ﷺ) ಅವರೊಂದಿಗೆ ಕೇಳಿದರು. “ನೀವು ಅವನಿಗೆ ಏನು ಕೊಡಲು ಬಯಸುತ್ತೀರಿ?”

ತಾಯಿ ಹೇಳಿದರು. “ಖರ್ಜೂರ.”

ಪ್ರವಾದಿ(ﷺ) ಹೇಳಿದರು. “ನೀವೇನೂ ಅವನಿಗೆ ಕೊಡದೇ ಇರುತ್ತಿದ್ದರೆ ನಿಮ್ಮ ಲೆಕ್ಕಕ್ಕೆ ಒಂದು ಸುಳ್ಳು ಬರೆದಿಡಲಾಗುತ್ತಿತ್ತು.” (ಅಬೂದಾವೂದ್ 4991, ಮುಸ್ನದ್ ಅಹ್ಮದ್ 3/447, ಸಿಲ್ಸಿಲತುಸಹೀಹ 748)

ಪ್ರವಾದಿ(ﷺ) ರವರಿಗೆ ಅವರ ಮನೆಯಲ್ಲಿ ಯಾರಾದರೂ ಸುಳ್ಳು ಹೇಳಿದ್ದು ಗೊತ್ತಾದರೆ ಅವರು ಅವರಿಂದ ಮುಖ ತಿರುಗಿಸುತ್ತಿದ್ದರು.

ಕೆಲವರು ಹಾಸ್ಯ ವಿನೋದಕ್ಕಾಗಿ, ಜನರನ್ನು ಮನರಂಜಿಸಲಿಕ್ಕಾಗಿ ಕಟ್ಟುಕಥೆಗಳನ್ನು ರಚಿಸಿ ಅದನ್ನು ರಸವತ್ತಾದ ಶೈಲಿಯಲ್ಲಿ ಜನರ ಮುಂದೆ ಹೇಳುತ್ತಿರುತ್ತಾರೆ. ಇನ್ನು ಕೆಲವರು ಸುಳ್ಳನ್ನೇ ತಮ್ಮ ಉಪಜೀವನವನ್ನಾಗಿ ಮಾಡಿಕೊಂಡು ಮಾತು ಮಾತಿಗೂ ಸುಳ್ಳೇ ಹೇಳುತ್ತಿರುತ್ತಾರೆ. ಸಿಕ್ಕಿ ಹಾಕಿಕೊಂಡಾಗ ಅದನ್ನು ಇನ್ನೊಂದು ಸುಳ್ಳಿನಿಂದಲೇ ಅದನ್ನು ಸರಿಪಡಿಸಲು ನೋಡುತ್ತಾರೆ. ಸುಳ್ಳನ್ನು ಆಶ್ರಯಿಸಿ ಜೀವಿಸುವವರು ಕಾರ್ಯ ಸಾಧಿಸುವವರು ಧಾರ್ಮಿಕ ವಿದ್ವಾಂಸರ ವೇಷದಲ್ಲೂ, ಸಂದೇಶ ಪ್ರಚಾರದ ಕ್ಷೇತ್ರದಲ್ಲೂ ಬಹಳಷ್ಟು ಜನ ಕಾಣಲು ಸಿಗುತ್ತಾರೆ.

ಇಮಾಮ್ ಝುಹ್ರಿ(ؒ) ಅಂದಿನ ಆಡಳಿತಗಾರರ ಸಮ್ಮುಖದಲ್ಲಿ ಏನೋ ಒಂದು ವಿಷಯಕ್ಕೆ ಸಾಕ್ಷಿಯಾಗಲು ಹೋಗಿದ್ದರು. ಸುಲ್ತಾನ್ ಕೇಳಿದರು. “ನೀವು ಸುಳ್ಳು ಹೇಳುತ್ತೀರೋ?” ಇಮಾಮ್ ಝುಹ್ರಿ(ؒ) ಕೋಪದಿಂದ ಹೇಳಿದರು. “ಅಊಝು ಬಿಲ್ಲಾಹ್! ನಾನು ಸುಳ್ಳು ಹೇಳುವೆನೇ? ಆಕಾಶದಿಂದ ಅಲ್ಲಾಹು ಸುಳ್ಳು ಹೇಳುವುದನ್ನು ಧರ್ಮಸಮ್ಮತಗೊಳಿಸಿದ್ದಾನೆಂದು ಸಂದೇಶವೇನಾದರೂ ಬಂದಿದೆಯೇ? ಹಾಗೆ ಬಂದರೂ ನಾನು ಸುಳ್ಳು ಹೇಳಲಾರೆ. ಹಾಗಿರುವಾಗ ಅಲ್ಲಾಹು ಸುಳ್ಳು ಹೇಳುವುದನ್ನು ನಿಷಿದ್ಧಗೊಳಿಸಿರುವಾಗ ನಾನು ಸುಳ್ಳು ಹೇಳುವೆನೇ?”

**ಉಪಸಂಹಾರ:** ಜನರು ಶುದ್ಧ ಸುಳ್ಳು ಎಂದು ಹೇಳಿ ತಮಗೆ ಮೋಸ ಮಾಡುತ್ತಾರೆ. ಏಕೆಂದರೆ ಸುಳ್ಳು ಎಂದೂ ಅಶುದ್ಧವೇ ಆಗಿರುತ್ತದೆ. ■

---

*20 ನೇ ಪುಟದಿಂದ*

## ಒಳಿತುಗಳ ಮೂಲಕಾರಣ

ಅಚಲವಾಗಿ ನಿಲ್ಲುತ್ತಾನೋ, ಅದರ ಬಗ್ಗೆ ಎಚ್ಚರವಹಿಸುತ್ತಾನೋ, ಅದರ ಹಕ್ಕುಗಳನ್ನು ಸಂದಾಯ ಮಾಡಿ ಸ್ವಯಂ ತನ್ನ ದೇಹದೊಡನೆ ಜಿಹಾದ್ ಮಾಡುತ್ತಾನೋ ಅವನೇ ನಿಜವಾದ ಮುತ್ತಕಿ. ಅವನೇ ಸ್ವರ್ಗ ಮತ್ತು ಗೌರವದ ವಾಗ್ದಾನ ಮಾಡಲಾದವನು. ಅವನೇ ಸಂಕಟ ನಿವಾರಣೆ ಮತ್ತು ಕಾರ್ಯಸುಲಭದ ಬಗ್ಗೆ ವಾಗ್ದಾನ ಮಾಡಲಾದವನು. ಪಾಪಗಳನ್ನು ಕ್ಷಮಿಸಲಾಗುವುದು ಮತ್ತು ದೋಷಗಳನ್ನು ಮನ್ನಿಸಲಾಗುವುದೆಂಬ ವಾಗ್ದಾನವೂ ಅವನಿಗಿದೆ. ಶತ್ರುಗಳ ವಿರುದ್ಧ ಸಹಾಯ ನೀಡಲಾಗುವುದು, ಅವರ ತಂತ್ರಗಳಿಂದ ಪಾರು ಮಾಡಲಾಗುವುದು ಎಂಬ ವಾಗ್ದಾನವೂ ಅವನಿಗಿದೆ.

ಆದರೆ ಅವನು ಅಲ್ಲಾಹನ ಧರ್ಮದಲ್ಲಿ ಸಹನೆಯಿಂದ ಅಚಲವಾಗಿ ನಿಂತರೆ ಮಾತ್ರ. ಅಲ್ಲಾಹನಿಗಾಗಿ ತನ್ನ ದೇಹದೊಡನೆ ಜಿಹಾದ್ ಮಾಡುತ್ತಾ ಅಲ್ಲಾಹನ ಹಕ್ಕನ್ನು ಮತ್ತು ಮನುಷ್ಯರ ಹಕ್ಕನ್ನು ಸಂದಾಯ ಮಾಡಿದರೆ ಮಾತ್ರ. ಇವನೇ ನಿಜವಾದ ಮುತ್ತಕಿ, ಇವನೇ ನಿಜವಾದ ವಿಶ್ವಾಸಿ, ಇವನೇ ನಿಜವಾದ ಸತ್ಕರ್ಮಿ, ಇವನೇ ನಿಜವಾದ ವಿಜಯಿ, ಇವನೇ ನಿಜವಾದ ಸನ್ಮಾರ್ಗಿ. ಇವನೇ ಅಲ್ಲಾಹನನ್ನು ಭಯಪಟ್ಟು ಜೀವಿಸುವ ಇವನೇ ಮುತ್ತಕಿ. ಇವನೇ ನಿಜವಾದ ಮುಸ್ಲಿಮ್. ■

# ಇಸ್ಲಾಮಿನಲ್ಲಿ ಅನ್ಯೋನ್ಯ ಸಂಬಂಧ ಸುಧಾರಣೆಯ ಮಹತ್ವ

ನಮಗಿಂತ ಮುಂಚಿನ ಧರ್ಮದವರು ತಮ್ಮೊಳಗಿನ ವಿಷಯಗಳಲ್ಲಿ ಹಲವು ಅಭಿಪ್ರಾಯದವರಾಗಿ ಮತ್ತು ಮಿಥ್ಯ ವಿಶ್ವಾಸಿಗಳಾಗಿ ಭಿನ್ನರಾದರು. ಅವರಲ್ಲಿ ಪ್ರತಿಯೊಂದು ಗುಂಪು ತಾವೇ ಸತ್ಯದಲ್ಲಿರುವವರು ಎಂದು ವಾದಿಸುತ್ತಿದ್ದರು. ಈ ಸಮುದಾಯವು ಕೂಡ ತಮ್ಮೊಳಗಿನ ಭಿನ್ನಾಭಿಪ್ರಾಯಗಳಿಂದಾಗಿ ಹಲವು ವಿಶ್ವಾಸಗಳೊಂದಿಗೆ ಭಿನ್ನರಾದರು. ಅವರೆಲ್ಲರೂ ದುರ್ಮಾರ್ಗದಲ್ಲಿದ್ದಾರೆ. ಒಂದೇ ಒಂದು ಪಂಗಡದ ಹೊರತು. ಅವರು ಅಹ್ಲುಸ್ಸುನ್ನ ವಲ್ ಜಮಾಅ.

✍ ಶೈಖ್ ರಬೀಅ್ ಇಬ್ನ್ ಹಾದೀ

ಇಸ್ಲಾಮ್ ಸಾಧಿಸಲು ಉದ್ದೇಶಿಸಿದ ಮಹಾ ಗುರಿಗಳಲ್ಲಿ ಅನ್ಯೋನ್ಯ ಸಂಬಂಧ ಸುಧಾರಣೆಯು ಒಂದಾಗಿದೆ. ಅಲ್ಲಾಹು(ﷻ) ಅವನ ಗ್ರಂಥದಲ್ಲಿ ಸಂಬಂಧ ಸುಧಾರಣೆಯ ಬಗ್ಗೆ ಆದೇಶಿಸಿದ್ದಾನೆ. ಮಾತ್ರವಲ್ಲ ಅದನ್ನು ಪ್ರೋತ್ಸಾಹಿಸಿದ್ದಾನೆ. ಸಂಧಾನ ಮಾಡುವುದನ್ನು ಉತ್ತೇಜಿಸಿದ್ದಾನೆ ಮತ್ತು ಭಿನ್ನಮತ ತಾಳುವುದನ್ನು ವಿರೋಧಿಸಿದ್ದಾನೆ.

ಅಲ್ಲಾಹು(ﷻ) ಹೇಳುತ್ತಾನೆ:

﴿يَسْـَٔلُونَكَ عَنِ ٱلْأَنفَالِ ۖ قُلِ ٱلْأَنفَالُ لِلَّهِ وَٱلرَّسُولِ ۖ فَٱتَّقُوا۟ ٱللَّهَ وَأَصْلِحُوا۟ ذَاتَ بَيْنِكُمْ ۖ وَأَطِيعُوا۟ ٱللَّهَ وَرَسُولَهُۥٓ إِن كُنتُم مُّؤْمِنِينَ ﴿١﴾﴾

"ಅವರು ಸಮರಾರ್ಜಿತ ಸೊತ್ತಿನ ಬಗ್ಗೆ ತಮ್ಮಲ್ಲಿ ವಿಚಾರಿಸುತ್ತಿದ್ದಾರೆ. ಹೇಳಿರಿ. ಸಮರಾರ್ಜಿತ ಸೊತ್ತು ಅಲ್ಲಾಹು ಮತ್ತು ಅವನ ರಸೂಲರಿಗೆ ಇರುವುದಾಗಿದೆ. ಆದ್ದರಿಂದ ನೀವು ಅಲ್ಲಾಹನನ್ನು ಭಯಪಟ್ಟು ಜೀವಿಸಿರಿ ಮತ್ತು ಅನ್ಯೋನ್ಯ ಸಂಬಂಧ ಸುಧಾರಣೆ ಮಾಡಿರಿ. ನೀವು ವಿಶ್ವಾಸಿಗಳಾಗಿದ್ದರೆ ಅಲ್ಲಾಹನನ್ನು ಮತ್ತು ಅವನ ರಸೂಲರನ್ನು ಅನುಸರಿಸಿರಿ." (ಅಲ್‌ಅನ್ಫಾಲ್ 1)

ಅಲ್ಲಾಹು(ﷻ) ಹೇಳುತ್ತಾನೆ:

﴿وَإِنْ خِفْتُمْ شِقَاقَ بَيْنِهِمَا فَٱبْعَثُوا۟ حَكَمًا مِّنْ أَهْلِهِۦ وَحَكَمًا مِّنْ أَهْلِهَآ إِن يُرِيدَآ إِصْلَـٰحًا يُوَفِّقِ ٱللَّهُ بَيْنَهُمَآ ۗ إِنَّ ٱللَّهَ كَانَ عَلِيمًا خَبِيرًا ﴿٣٥﴾﴾

"ಅವರಿಬ್ಬರ ನಡುವೆ (ದಂಪತಿಗಳ ನಡುವೆ) ವೈಮನಸ್ಸು ಉಂಟಾಗಬಹುದೆಂದು ನೀವು ಭಯಪಡುವುದಾದರೆ ಅವನ ಕುಟುಂಬದಿಂದ ಒಬ್ಬ ತೀರ್ಪುಗಾರನನ್ನು ಮತ್ತು ಅವಳ ಕಡೆಯಿಂದ ಒಬ್ಬ ತೀರ್ಪುಗಾರನನ್ನು ಕಳುಹಿಸಿರಿ. ಅವರಿಬ್ಬರೂ ಸುಧಾರಣೆಯನ್ನು ಬಯಸುವುದಾದರೆ ಅಲ್ಲಾಹು ಅದನ್ನು ಅವರಿಗೆ ಅನುಕೂಲ ಮಾಡಿಕೊಡುವನು. ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ ಸೂಕ್ಷ್ಮಜ್ಞಾನಿಯೂ ಆಗಿದ್ದಾನೆ." (ಅನ್ನಿಸಾಅ್ 35)

ಅನ್ಯೋನ್ಯ ಸಂಬಂಧ ಸುಧಾರಣೆಗೆ ಇಸ್ಲಾಮಿನಲ್ಲಿರುವ ಮಹತ್ವಪೂರ್ಣ ಸ್ಥಾನಮಾನವನ್ನು ತಿಳಿಸಿಕೊಡಲು ಖವಾರಿಜ್‌ಗಳೊಂದಿಗೆ ವಾದ ಮಾಡುವಾಗ ಇಬ್ನ್ ಅಬ್ಬಾಸ್(رضي الله عنه) ರವರು ಈ ಮೇಲಿನ ಆಯತ್ತನ್ನು ಪುರಾವೆಯಾಗಿ ಮುಂಡಿಸಿದ್ದರು. ಅವರು ಹೇಳಿದರು:

أَمَّا قَوْلُكُمْ حَكَّمَ الرِّجَالَ فِي أَمْرِ اللَّهِ فَأَنَا أَقْرَأُ عَلَيْكُمْ فِي كِتَابِ اللَّهِ أَنْ قَدْ رُدَّ حُكْمُهُ إِلَى الرِّجَالِ فِي ثَمَنِ رُبُعِ دِرْهَمٍ. فَأَمَرَ اللَّهُ تَعَالَى أَنْ يُحَكِّمُوا فِيهِ. أَرَأَيْتُمْ قَوْلَ اللَّهِ تَبَارَكَ وَتَعَالَى: ﴿ يَـٰٓأَيُّهَا ٱلَّذِينَ ءَامَنُوا۟ لَا تَقْتُلُوا۟ ٱلصَّيْدَ وَأَنتُمْ حُرُمٌ ۚ وَمَن قَتَلَهُۥ مِنكُم مُّتَعَمِّدًا فَجَزَآءٌ مِّثْلُ مَا قَتَلَ مِنَ ٱلنَّعَمِ يَحْكُمُ بِهِۦ ذَوَا عَدْلٍ مِّنكُمْ ﴾. وَكَانَ مِنْ حُكْمِ اللَّهِ وَصَيَّرَهُ إِلَى الرِّجَالِ يُحَكِّمُونَ فِيهِ. وَلَوْ شَاءَ لَحَكَمَ فِيهِ. فَنَشَدْتُكُمْ بِاللَّهِ أَحُكْمُ الرِّجَالِ فِي صَلَاحِ ذَاتِ الْبَيْنِ وَحِقْنِ دِمَائِهِمْ أَفْضَلُ أَمْ حُكْمُهُمْ فِي أَرْنَبٍ وَنَحْوِهَا مِنَ الصَّيْدِ؟ قَالُوا: بَلَى، بَلْ وَهَذَا أَفْضَلُ. وَفِي الْمَرْأَةِ وَزَوْجِهَا قَالَ اللَّهُ عَزَّ وَجَلَّ ﴿ وَإِنْ خِفْتُمْ شِقَاقَ بَيْنِهِمَا فَٱبْعَثُوا۟ حَكَمًا مِّنْ أَهْلِهِۦ وَحَكَمًا مِّنْ أَهْلِهَآ ﴾. فَنَشَدْتُكُمْ بِاللَّهِ أَحُكْمُ الرِّجَالِ فِي صَلَاحِ ذَاتِ الْبَيْنِ وَحِقْنِ دِمَائِهِمْ أَفْضَلُ أَمْ حُكْمُهُمْ فِي بِضْعِ مَرْأَةٍ؟ أَخَرَجْتُ مِنْ هَذِهِ؟ قَالُوا : نَعَمْ.

“ಅಲ್ಲಾಹು ತೀರ್ಪು ನೀಡಬೇಕಾದ ವಿಷಯದಲ್ಲಿ ಅವರು ಜನರನ್ನು ತೀರ್ಪುಗಾರರನ್ನಾಗಿ ನೇಮಿಸಿದ್ದಾರೆ ಎಂಬ ನಿಮ್ಮ ವಾದದ ಬಗ್ಗೆ ಹೇಳುವುದಾದರೆ ನಾನು ನಿಮಗೆ ಅಲ್ಲಾಹನ ಗ್ರಂಥದಿಂದ ಒಂದು ಆಯತ್ತನ್ನು ಓದಿ ಕೊಡುತ್ತೇನೆ. ಅದರಲ್ಲಿ ಅಲ್ಲಾಹು ಕಾಲು ದಿರ್ಹಂ ಮೌಲ್ಯದ ಒಂದು ವಸ್ತುವಿನ ಬಗ್ಗೆ ತೀರ್ಪು ನೀಡುವ ಅಧಿಕಾರವನ್ನು ಜನರಿಗೆ ನೀಡಿ ಆ ವಿಷಯದಲ್ಲಿ ಜನರು ತೀರ್ಪು ನೀಡುವಂತೆ ಅಲ್ಲಾಹು(ﷻ) ಆದೇಶಿಸುತ್ತಾನೆ. ಅಲ್ಲಾಹನ(ﷻ) ಈ ವಚನವನ್ನು ನೀವು ಕಂಡಿಲ್ಲವೇ? “ಓ ಸತ್ಯವಿಶ್ವಾಸಿಗಳೇ! ನೀವು ಇಹ್ರಾಮಿನಲ್ಲಿರುವಾಗ ಬೇಟೆಯಾಡಿ ಬೇಟೆಮೃಗವನ್ನು ಕೊಲ್ಲಬಾರದು. ಯಾರಾದರೂ ಉದ್ದೇಶಪೂರ್ವಕ ಕೊಂದರೆ ಅದಕ್ಕೆ ಪ್ರತಿಫಲವಾಗಿ ಅವನು ಕೊಂದ ಪ್ರಾಣಿಯನ್ನು ಹೋಲುವ ಜಾನುವಾರನ್ನು ಅವನು ಬಲಿ ಕೊಡಬೇಕು. ಈ ವಿಷಯದಲ್ಲಿ ನಿಮ್ಮಲ್ಲಿರುವ ಇಬ್ಬರು ನ್ಯಾಯವಂತರು ತೀರ್ಪು ನೀಡಬೇಕು.” (ಕುರ್‌ಆನ್ 5:95) ಇದು ಅಲ್ಲಾಹು ತೀರ್ಪು ನೀಡಬೇಕಾದ ವಿಷಯ. ಆದರೆ ಅವನು ತೀರ್ಪು ನೀಡುವ ಅಧಿಕಾರವನ್ನು ಜನರಿಗೆ ನೀಡುತ್ತಾನೆ. ಅವನು ಇಚ್ಛಿಸಿದ್ದರೆ ಅವನೇ ತೀರ್ಪು ನೀಡುತ್ತಿದ್ದನು. ನಾನು ಅಲ್ಲಾಹನನ್ನು ಮುಂದಿಟ್ಟು ನಿಮ್ಮಲ್ಲಿ ಕೇಳುತ್ತಿದ್ದೇನೆ. ಅನ್ಯೋನ್ಯ ಸಂಬಂಧ ಸುಧಾರಣೆಯ ವಿಷಯದಲ್ಲಿ ಮತ್ತು ರಕ್ತ ಹರಿಸುವ ವಿಷಯದಲ್ಲಿ ತೀರ್ಪು ನೀಡಲು ಜನರನ್ನು ನೇಮಿಸುವುದು ಶ್ರೇಷ್ಠವೋ ಅಥವಾ ಒಂದು ಮೊಲ ಮುಂತಾದ ಬೇಟೆ ಮೃಗವನ್ನು ಕೊಂದ ವಿಷಯದಲ್ಲಿ ತೀರ್ಪು ನೀಡಲು ಜನರನ್ನು ನೇಮಿಸುವುದು ಶ್ರೇಷ್ಠವೋ? ಅವರು ಹೇಳಿದರು: ಹೌದು! ಇದು ಶ್ರೇಷ್ಠ.

ಇಬ್ನ್ ಅಬ್ಬಾಸ್(ؓ) ಮುಂದುವರಿಯುತ್ತಾ ಹೇಳಿದರು: ಒಬ್ಬ ಮಹಿಳೆ ಮತ್ತು ಆಕೆಯ ಗಂಡನ ವಿಷಯದಲ್ಲಿ ಅಲ್ಲಾಹು ಹೇಳುತ್ತಾನೆ. “ಅವರಿಬ್ಬರ ನಡುವೆ (ದಂಪತಿಗಳ ನಡುವೆ) ವೈಮನಸ್ಸು ಉಂಟಾಗಬಹುದೆಂದು ನೀವು ಭಯಪಡುವುದಾದರೆ ಅವನ ಕುಟುಂಬದಿಂದ ಒಬ್ಬ ತೀರ್ಪುಗಾರನನ್ನು ಮತ್ತು ಅವಳ ಕಡೆಯಿಂದ ಒಬ್ಬ ತೀರ್ಪುಗಾರನನ್ನು ಕಳುಹಿಸಿರಿ”. (ಕುರ್‌ಆನ್ 4:35) ನಾನು ಅಲ್ಲಾಹನನ್ನು ಮುಂದಿಟ್ಟು ನಿಮ್ಮಲ್ಲಿ ಕೇಳುತ್ತಿದ್ದೇನೆ. ಅನ್ಯೋನ್ಯ ಸಂಬಂಧ ಸುಧಾರಣೆಯ ವಿಷಯದಲ್ಲಿ ಮತ್ತು ರಕ್ತ ಹರಿಸುವ ವಿಷಯದಲ್ಲಿ ತೀರ್ಪು ನೀಡಲು ಜನರನ್ನು ನೇಮಿಸುವುದು ಶ್ರೇಷ್ಠವೋ ಅಥವಾ ಒಬ್ಬ ಮಹಿಳೆಯ ಖಾಸಗಿ ವಿಷಯದ ಬಗ್ಗೆ ತೀರ್ಪು ತೀರ್ಪು ನೀಡಲು ಜನರನ್ನು ನೇಮಿಸುವುದು ಶ್ರೇಷ್ಠವೋ? ಈಗ ನಿಮಗೆ ವಿಷಯ ಸ್ಪಷ್ಟವಾಯಿತೇ? ಅವರು ಹೇಳಿದರು: ಹೌದು. (ಅನ್ನಸಾಈ ತಮ್ಮ ಅಲ್‌ಕುಬ್ರಾದಲ್ಲಿ (5/165 ಹದೀಸ್ ನಂ 8522) ಇದನ್ನು ವರದಿ ಮಾಡಿದ್ದಾರೆ.)

ಅಲ್ಲಾಹು(ﷻ) ಹೇಳುತ್ತಾನೆ:

﴿ لَّا خَيْرَ فِى كَثِيرٍ مِّن نَّجْوَىٰهُمْ إِلَّا مَنْ أَمَرَ بِصَدَقَةٍ أَوْ مَعْرُوفٍ أَوْ إِصْلَـٰحٍۭ بَيْنَ ٱلنَّاسِ ۚ وَمَن يَفْعَلْ ذَٰلِكَ ٱبْتِغَآءَ مَرْضَاتِ ٱللَّهِ فَسَوْفَ نُؤْتِيهِ أَجْرًا عَظِيمًا ﴿١١٤﴾ ﴾

“ಅವರು ಮಾಡುವ ಯಾವುದೇ ರಹಸ್ಯ ಮಾತುಕತೆಗಳಲ್ಲೂ ಒಳಿತಿಲ್ಲ. ದಾನ ಮಾಡಲು, ಸದಾಚಾರ ಮಾಡಲು ಮತ್ತು ಜನರ

ಮಧ್ಯೆ ಸಂಬಂಧ ಸುಧಾರಣೆ ಮಾಡಲು ಆದೇಶಿಸುವವರ ಹೊರತು. ಯಾರು ಅಲ್ಲಾಹನ ತೃಪ್ತಿಯನ್ನು ಬಯಸಿ ಹಾಗೆ ಮಾಡುತ್ತಾರೋ ಅವರಿಗೆ ಶೀಘ್ರದಲ್ಲೇ ನಾವು ಮಹಾ ಪ್ರತಿಫಲವನ್ನು ನೀಡುವೆವು." (ಅನ್ನಿಸಾಅ್ 114)

ಅಲ್ಲಾಹು(ﷻ) ಹೇಳುತ್ತಾನೆ:

﴿وَإِنِ ٱمْرَأَةٌ خَافَتْ مِنۢ بَعْلِهَا نُشُوزًا أَوْ إِعْرَاضًا فَلَا جُنَاحَ عَلَيْهِمَآ أَن يُصْلِحَا بَيْنَهُمَا صُلْحًا وَٱلصُّلْحُ خَيْرٌ وَأُحْضِرَتِ ٱلْأَنفُسُ ٱلشُّحَّ وَإِن تُحْسِنُوا۟ وَتَتَّقُوا۟ فَإِنَّ ٱللَّهَ كَانَ بِمَا تَعْمَلُونَ خَبِيرًا ﴿١٢٨﴾﴾

"ತನ್ನ ಗಂಡನಿಗೆ ತನ್ನ ಬಗ್ಗೆ ಕಾಳಜಿಯಿಲ್ಲ ಅಥವಾ ತನ್ನನ್ನು ನಿರ್ಲಕ್ಷಿಸುತ್ತಾನೆಂದು ಹೆಂಡತಿ ಭಯಪಟ್ಟರೆ ಅವರಿಬ್ಬರ ನಡುವೆ ಸಂಧಾನ ಮಾಡುವುದರಲ್ಲಿ ಅವರಿಬ್ಬರ ಮೇಲೂ ದೋಷವಿಲ್ಲ. ಸಂಧಾನ ಮಾಡುವುದು ಉತ್ತಮವಾಗಿದೆ. ಜಿಪುಣತನ ಮನಸ್ಸಿನಿಂದ ಬಿಟ್ಟು ಹೋಗುವುದಿಲ್ಲ. ನೀವು ಒಳಿತನ್ನು ಮಾಡುತ್ತಾ ಅಲ್ಲಾಹನನ್ನು ಭಯಪಟ್ಟು ಜೀವಿಸುವುದಾದರೆ ಖಂಡಿತವಾಗಿಯೂ ಅಲ್ಲಾಹು ನೀವು ಮಾಡುತ್ತಿರುವುದರ ಬಗ್ಗೆ ಸೂಕ್ಷ್ಮವಾಗಿ ಅರಿಯುತ್ತಿದ್ದಾನೆ." (ಅನ್ನಿಸಾಅ್ 128)

ಅಲ್ಲಾಹು(ﷻ) ಹೇಳುತ್ತಾನೆ.

﴿وَإِن طَآئِفَتَانِ مِنَ ٱلْمُؤْمِنِينَ ٱقْتَتَلُوا۟ فَأَصْلِحُوا۟ بَيْنَهُمَا فَإِنۢ بَغَتْ إِحْدَىٰهُمَا عَلَى ٱلْأُخْرَىٰ فَقَٰتِلُوا۟ ٱلَّتِى تَبْغِى حَتَّىٰ تَفِىٓءَ إِلَىٰٓ أَمْرِ ٱللَّهِ فَإِن فَآءَتْ فَأَصْلِحُوا۟ بَيْنَهُمَا بِٱلْعَدْلِ وَأَقْسِطُوٓا۟ إِنَّ ٱللَّهَ يُحِبُّ ٱلْمُقْسِطِينَ ﴿٩﴾ إِنَّمَا ٱلْمُؤْمِنُونَ إِخْوَةٌ فَأَصْلِحُوا۟ بَيْنَ أَخَوَيْكُمْ وَٱتَّقُوا۟ ٱللَّهَ لَعَلَّكُمْ تُرْحَمُونَ ﴿١٠﴾﴾

"ವಿಶ್ವಾಸಿಗಳಲ್ಲಿ ಸೇರಿದ ಎರಡು ಪಂಗಡಗಳು ಪರಸ್ಪರ ಹೋರಾಡಿದರೆ ಅವರ ಮಧ್ಯೆ ಸಂಧಾನ ಮಾಡಿರಿ. ಅವರಲ್ಲೊಂದು ಪಂಗಡ ಇನ್ನೊಂದು ಪಂಗಡದ ಮೇಲೆ ಅತಿಕ್ರಮವೆಸಗಿದರೆ ಅತಿಕ್ರಮವೆಸಗಿದ ಪಂಗಡ ಅಲ್ಲಾಹನ ಆಜ್ಞೆಗೆ ಮರಳುವ ತನಕ ಅವರೊಡನೆ ಯುದ್ಧ ಮಾಡಿರಿ. ಆ ಪಂಗಡವು ಮರಳಿದರೆ ಅವರ ಮಧ್ಯೆ ನ್ಯಾಯಯುತವಾಗಿ ಸಂಧಾನ ಮಾಡಿರಿ. ನ್ಯಾಯಯುತವಾಗಿ ವರ್ತಿಸಿರಿ. ನ್ಯಾಯಯುತವಾಗಿ ವರ್ತಿಸುವವರನ್ನು ಅಲ್ಲಾಹು ಖಂಡಿತವಾಗಿಯೂ ಇಷ್ಟಪಡುತ್ತಾನೆ. ಖಂಡಿತವಾಗಿಯೂ ವಿಶ್ವಾಸಿಗಳು ಸಹೋದರರಾಗಿದ್ದಾರೆ. ಆದ್ದರಿಂದ ನಿಮ್ಮ ಸಹೋದರರ ಮಧ್ಯೆ ಸಂಧಾನ ಮಾಡಿರಿ. ಅಲ್ಲಾಹನನ್ನು ಭಯಪಟ್ಟು ಜೀವಿಸಿರಿ. ನಿಮಗೆ ಕರುಣೆ ಲಭ್ಯವಾಗುವುದಕ್ಕಾಗಿ." (ಅಲ್‌ಹುಜುರಾತ್ 9–10)

ಈ ಮೇಲಿನ ಆಯತ್ತನ್ನು ವ್ಯಾಖ್ಯಾನ ಮಾಡುತ್ತಾ ಇಬ್ನ್ ಕಸೀರ್(ರ) ಹೇಳುತ್ತಾರೆ:

يَقُولُ تَعَالَى آمِرًا بِالْإِصْلَاحِ بَيْنَ الْمُسْلِمِينَ الْبَاغِينَ بَعْضُهُمْ عَلَى بَعْضٍ: ﴿وَإِن طَآئِفَتَانِ مِنَ ٱلْمُؤْمِنِينَ ٱقْتَتَلُوا۟ فَأَصْلِحُوا۟ بَيْنَهُمَا﴾ فَسَمَّاهُمْ مُؤْمِنِينَ مَعَ الِاقْتِتَالِ. وَبِهَذَا اسْتَدَلَّ الْبُخَارِيُّ وَغَيْرُهُ عَلَى أَنَّهُ لَا يَخْرُجُ مِنَ الْإِيمَانِ بِالْمَعْصِيَةِ، وَإِنْ عَظُمَتْ. لَا كَمَا يَقُولُهُ الْخَوَارِجُ وَمَنْ تَابَعَهُمْ مِنَ الْمُعْتَزِلَةِ وَنَحْوِهِمْ.

وَهَكَذَا ثَبَتَ فِي صَحِيحِ الْبُخَارِيِّ مِنْ حَدِيثِ الْحَسَنِ، عَنْ أَبِي بَكْرَةَ أَنَّ رَسُولَ اللَّهِ صَلَّى اللَّهُ عَلَيْهِ وَسَلَّمَ خَطَبَ يَوْمًا وَمَعَهُ عَلَى الْمِنْبَرِ الْحَسَنُ بْنُ عَلِيٍّ رَضِيَ اللَّهُ عَنْهُمَا. فَجَعَلَ يَنْظُرُ إِلَيْهِ مَرَّةً وَإِلَى النَّاسِ أُخْرَى وَيَقُولُ: «إِنَّ ابْنِي هَذَا سَيِّدٌ. وَلَعَلَّ اللَّهَ أَنْ يُصْلِحَ بِهِ بَيْنَ فِئَتَيْنِ عَظِيمَتَيْنِ مِنَ الْمُسْلِمِينَ». فَكَانَ كَمَا قَالَ

صَلَــوَاتُ اللَّهِ وَسَــلَامُهُ عَلَيْهِ. أَصْلَحَ اللَّــهُ بِهِ بَيْنَ أَهْلِ الشَّــامِ وَأَهْلِ الْعِرَاقِ بَعْدَ الْحَــرُوبِ الطَّوِيلَةِ وَالْوَاقِعَــاتِ الْمُهُولَةِ.

وَقَوْلُــهُ: ﴿حَتَّىٰ تَفِيٓءَ إِلَىٰٓ أَمۡرِ ٱللَّهِۚ﴾ أَيْ حَتَّــى تَرْجِعَ إِلَى أَمْــرِ اللَّهِ وَتَسْــمَعَ لِلْحَقِّ وَتُطِيعَــهُ. كَمَا ثَبَتَ فِــي الصَّحِيحِ عَــنْ أَنَسٍ أَنَّ رَسُــولَ اللَّــهِ صَلَّى اللَّــهُ عَلَيْهِ وَسَــلَّمَ قَــالَ: «انْصُرْ أَخَــاكَ ظَالِمًا أَوْ مَظْلُومًــا». قُلْتُ: يَــا رَسُــولَ اللَّهِ! هَــذَا نَصَرْتُهُ مَظْلُومًــا. فَكَيْــفَ أَنْصُــرُهُ ظَالِمًا؟ قَــالَ: «تَمْنَعُهُ مِنَ الظُّلْمِ. فَــذَاكَ نَصْــرُكَ إِيَّاهُ».

“ಪರಸ್ಪರ ಅತಿರೇಕವೆಸಗುವ ಮುಸಲ್ಮಾನರ ಮಧ್ಯೆ ಸಂಧಾನ ಮಾಡಬೇಕೆಂದು ಅಲ್ಲಾಹು ಆದೇಶಿಸುತ್ತಿದ್ದಾನೆ. “ವಿಶ್ವಾಸಿಗಳಲ್ಲಿ ಸೇರಿದ ಎರಡು ಪಂಗಡಗಳು ಪರಸ್ಪರ ಹೋರಾಡಿದರೆ ಅವರ ಮಧ್ಯೆ ಸಂಧಾನ ಮಾಡಿರಿ.” (ಕುರ್‌ಆನ್ 49:9) ಅವರು ಪರಸ್ಪರ ಹೋರಾಡುತ್ತಿದ್ದರೂ ಅಲ್ಲಾಹು ಅವರನ್ನು ವಿಶ್ವಾಸಿಗಳೆಂದು ಕರೆದಿದ್ದಾನೆ. ಅಜ್ಞೋಲ್ಲಂಘನೆ ಮಾಡುವವರು ಸತ್ಯವಿಶ್ವಾಸದ ವ್ಯಾಪ್ತಿಯಿಂದ ಹೊರಹೋಗುವುದಿಲ್ಲ ಎನ್ನುವುದಕ್ಕೆ ಅಲ್‌ಬುಖಾರಿ ಮತ್ತಿತರರು ಈ ಆಯತ್ತನ್ನು ಪುರಾವೆಯನ್ನು ಮಂಡಿಸುತ್ತಾರೆ. ಅದು ಎಷ್ಟೇ ದೊಡ್ಡದಾದರೂ ಸರಿ. ಆದ್ದರಿಂ ವಿಷಯ ಖವಾರಿಜ್‌ಗಳು ಮತ್ತು ಮುಅ್‌ತಝಿಲಗಳಲ್ಲಿರುವ ಅವರ ಹಿಂಬಾಲಕರು ಮತ್ತಿತರರು ಹೇಳುವ ಹಾಗೆ ಅಲ್ಲ.”

ಅದೇ ರೀತಿ ಸಹೀಹುಲ್ ಬುಖಾರಿಯಲ್ಲಿ ದೃಢಪಟ್ಟಿರುವ ಅಲ್‌ಹಸನ್‌ರವರು ಅಬೂ ಬಕ್ರ್(﵁) ರಿಂದ ವರದಿ ಮಾಡಿದ ಹದೀಸಿನಲ್ಲಿ ಹೀಗಿದೆ.

ಒಮ್ಮೆ ಅಲ್ಲಾಹನ ಸಂದೇಶವಾಹಕರು(ﷺ) ಖುತ್ಬ ನಿರ್ವಹಿಸುತ್ತಿದ್ದರು. ಅವರ ಜೊತೆ ಮಿಂಬರಿನಲ್ಲಿ (ಅವರ ಮೊಮ್ಮಗ) ಅಲ್‌ಹಸನ್ ಇಬ್ನ್ ಅಲೀ(﵁) ಇದ್ದರು. ಅವರೊಮ್ಮೆ ಮಗುವನ್ನು ನೋಡುತ್ತಿದ್ದರು. ಮತ್ತೊಮ್ಮೆ ಜನರನ್ನು ನೋಡುತ್ತಿದ್ದರು. ಅವರು ಹೇಳಿದರು: “ನನ್ನ ಈ ಮಗ ನಾಯಕನಾಗುತ್ತಾನೆ. ಅಲ್ಲಾಹು ಇವನ ಮೂಲಕ ಮುಸಲ್ಮಾನರ ಎರಡು ದೊಡ್ಡ ಪಂಗಡಗಳ ಮಧ್ಯೆ ಸಂಧಾನವುಂಟು ಮಾಡಲೂ ಬಹುದು.”

ಪ್ರವಾದಿ(ﷺ) ರವರು ಹೇಳಿದಂತೆಯೇ ಸಂಭವಿಸಿತು. ಸುದೀರ್ಘ ಯುದ್ಧಗಳ ನಂತರ ಅಲ್ಲಾಹು ಶಾಮ್ ನಿವಾಸಿಗಳು ಮತ್ತು ಇರಾಕ್ ನಿವಾಸಿಗಳ ಮಧ್ಯೆ ಅವರ ಮೂಲಕ ಸಂಧಾನವನ್ನು ಉಂಟು ಮಾಡಿದನು.

ಅಲ್ಲಾಹು ಹೇಳುತ್ತಾನೆ: “ಅವರಲ್ಲೊಂದು ಪಂಗಡ ಇನ್ನೊಂದು ಪಂಗಡದ ಮೇಲೆ ಅತಿಕ್ರಮವೆಸಗಿದರೆ ಅತಿಕ್ರಮವೆಸಗಿದ ಪಂಗಡ ಅಲ್ಲಾಹನ ಆಜ್ಞೆಗೆ ಮರಳುವ ತನಕ ಅವರೊಡನೆ ಯುದ್ಧ ಮಾಡಿರಿ.” ಅಂದರೆ: ಅಲ್ಲಾಹು ಮತ್ತು ಅವನ ರಸೂಲರ ಕಡೆಗೆ ಮರಳಿ ಸತ್ಯವನ್ನು ಕೇಳಿ ತಿಳಿದುಕೊಂಡು ಅದನ್ನು ಅನುಸರಿಸುವ ತನಕ ಯುದ್ಧ ಮಾಡಿರಿ. ಸಹೀಹಿನಲ್ಲಿ ದೃಢಪಟ್ಟ ಅನಸ್(﵁) ರವರ ಒಂದು ಹದೀಸಿನಲ್ಲಿ ಹೀಗಿದೆ. ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: “ನೀನು ನಿನ್ನ ಸಹೋದರನಿಗೆ ಸಹಾಯ ಮಾಡು. ಅವನು ಅನ್ಯಾಯವೆಸಗಿದವನು ಅಥವಾ ಅನ್ಯಾಯಕ್ಕೊಳಗಾದವನು ಆಗಿದ್ದರೂ ಸರಿ.” ನಾನು ಕೇಳಿದೆ: “ಓ ಅಲ್ಲಾಹನ ಸಂದೇಶವಾಹಕರೇ! ಆತ ಅನ್ಯಾಯಕ್ಕೊಳಗಾದವನಾದರೆ ನಾನು ಅವನಿಗೆ ಸಹಾಯ ಮಾಡುವುದು ಸರಿ. ಆದರೆ ಆತ ಅನ್ಯಾಯವೆಸಗಿದವನಾಗಿದ್ದರೆ ಆತನಿಗೆ ಸಹಾಯ ಮಾಡುವುದು ಹೇಗೆ?” ಪ್ರವಾದಿ(ﷺ) ಯವರು ಹೇಳಿದರು: “ಅವನನ್ನು ಅನ್ಯಾಯವೆಸಗದಂತೆ ತಡೆಯುವುದರಿಂದ. ಅದು ನೀನು ಅವನಿಗೆ ಮಾಡುವ ಸಹಾಯ.”

ಅಲ್ಲಾಹು(ﷻ) ಹೇಳುತ್ತಾನೆ:

﴿إِنَّ ٱلَّذِينَ فَرَّقُواْ دِينَهُمۡ وَكَانُواْ شِيَعٗا لَّسۡتَ مِنۡهُمۡ فِي شَيۡءٍۚ إِنَّمَآ أَمۡرُهُمۡ إِلَى ٱللَّهِ ثُمَّ يُنَبِّئُهُم بِمَا كَانُواْ يَفۡعَلُونَ ١٥٩﴾

“ಖಂಡಿತವಾಗಿಯೂ ತಮ್ಮ ಧರ್ಮವನ್ನು ಒಡೆದು ವಿಭಿನ್ನ ಗುಂಪುಗಳಾಗಿ ಮಾರ್ಪಟ್ಟವರು ಯಾರೋ ಅವರೊಂದಿಗೆ ತಮಗೆ ಯಾವುದೇ ಸಂಬಂಧವಿಲ್ಲ. ಅವರ ವಿಷಯವನ್ನು ಅಲ್ಲಾಹು ನೋಡಿಕೊಳ್ಳುತ್ತಾನೆ. ನಂತರ ಅವರು ಮಾಡುತ್ತಿದ್ದ ಕರ್ಮಗಳ ಬಗ್ಗೆ ಅವನು ಅವರಿಗೆ ತಿಳಿಸಿಕೊಡಲಿದ್ದಾನೆ.” (ಅಲ್‌ಅನ್‌ಆಮ್ 159)

ಈ ಆಯತ್ತಿನ ವ್ಯಾಖ್ಯಾನದಲ್ಲಿ ಇಬ್ನ್ ಕಸೀರ್(﵀) ಹೇಳುತ್ತಾರೆ:

وَالظَّاهِرُ أَنَّ الْآيَةَ عَامَّةٌ فِـي كُلِّ مَنْ فَارَقَ دِينَ اللَّهِ وَكَانَ مُخَالِفًا لَـهُ. فَإِنَّ اللَّهَ بَعَثَ رَسُـولَهُ بِالْهُدَى وَدِينِ الْحَـقِّ لِيُظْهِرَهُ عَلَـى الدِّينِ كُلِّهِ. وَشَـرْعُهُ وَاحِدٌ لَا اخْتِـلَافَ فِيهِ وَلَا افْتِـرَاقَ. فَمَنْ اخْتَلَفَ فِيـهِ. ﴿**وَكَانُواْ شِيَعًا**﴾ أَيْ: فِرَقًـا كَأَهْـلِ الْمِلَلِ وَالنِّحَلِ وَهِيَ الْأَهْـوَاءُ وَالضَّلَالَاتُ.

“ಅಲ್ಲಾಹನ ಧರ್ಮವನ್ನು ತ್ಯಜಿಸಿ ಅದಕ್ಕೆ ವಿರುದ್ಧವಾಗಿ ನಡೆಯುವವರೆಲ್ಲರಿಗೂ ಈ ಆಯತ್ ಸಾರ್ವತ್ರಿಕವಾಗಿ ಅನ್ವಯವಾಗುತ್ತದೆ ಎನ್ನುವುದು ಸ್ಪಷ್ಟ. ಕಾರಣ ಅಲ್ಲಾಹು ಅವನ ಪ್ರವಾದಿಯನ್ನು ಮಾರ್ಗದರ್ಶನದೊಂದಿಗೆ ಮತ್ತು ಸತ್ಯಧರ್ಮದೊಂದಿಗೆ ಅದನ್ನು ಇತರೆಲ್ಲ ಧರ್ಮಗಳ ಮೇಲೆ ವಿಜಯಿಯಾಗಿಸಲು ಕಳುಹಿಸಿದ್ದಾನೆ. ಅವನ ಕಾನೂನು ಒಂದೇ. ಅದರಲ್ಲಿ ಯಾವುದೇ ಭಿನ್ನಾಭಿಪ್ರಾಯ ಅಥವಾ ಒಡಕು ಇಲ್ಲ. ಯಾರು ಅದರಲ್ಲಿ ಭಿನ್ನಾಭಿಪ್ರಾಯ ತಾಳಿ ವಿಭಿನ್ನ ಪಂಗಡಗಳಾಗಿ ಮಾರ್ಪಡುತ್ತಾರೋ. ಅಂದರೆ: ಸ್ವೇಚ್ಛೆ ಮತ್ತು ದುರ್ಮಾರ್ಗಗಳನ್ನು ಅವಲಂಬಿಸಿಕೊಂಡ ಇತರ ಧರ್ಮಗಳು ಮತ್ತು ವಿಶ್ವಾಸಗಳಂತೆ.”

ಅಲ್ಲಾಹು(سبحانه وتعالى) ಹೇಳುತ್ತಾನೆ:

﴿ فَأَقِمۡ وَجۡهَكَ لِلدِّينِ حَنِيفٗاۚ فِطۡرَتَ ٱللَّهِ ٱلَّتِي
فَطَرَ ٱلنَّاسَ عَلَيۡهَاۚ لَا تَبۡدِيلَ لِخَلۡقِ ٱللَّهِۚ ذَٰلِكَ
ٱلدِّينُ ٱلۡقَيِّمُ وَلَٰكِنَّ أَكۡثَرَ ٱلنَّاسِ لَا
يَعۡلَمُونَ ٣٠ ۞ مُنِيبِينَ إِلَيۡهِ وَٱتَّقُوهُ وَأَقِيمُواْ
ٱلصَّلَوٰةَ وَلَا تَكُونُواْ مِنَ ٱلۡمُشۡرِكِينَ
٣١ مِنَ ٱلَّذِينَ فَرَّقُواْ دِينَهُمۡ وَكَانُواْ
شِيَعٗاۖ كُلُّ حِزۡبِۭ بِمَا لَدَيۡهِمۡ فَرِحُونَ ٣٢ ﴾

“ಆದ್ದರಿಂದ ತಾವು ಏಕನಿಷ್ಠರಾಗಿ ತಮ್ಮ ಮುಖವನ್ನು ಧರ್ಮದ ಕಡೆಗೆ ನೇರವಾಗಿ ನಿಲ್ಲಿಸಿರಿ. ಇದು ಅಲ್ಲಾಹು ಮನುಷ್ಯರನ್ನು ಸೃಷ್ಟಿಸಿದ ಅವನ ಪ್ರಕೃತಿಯಾಗಿದೆ. ಅಲ್ಲಾಹನ ಸೃಷ್ಟಿಗೆ ಯಾವುದೇ ಬದಲಾವಣೆಯಿಲ್ಲ. ಅದೇ ನೇರವಾದ ಧರ್ಮ. ಆದರೆ ಜನರಲ್ಲಿ ಹೆಚ್ಚಿನವರು ಇದನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಅವನ ಕಡೆಗೆ ಪಶ್ಚಾತ್ತಾಪದಿಂದ ಮರಳಿದವರಾಗಿ ಅವನನ್ನು ಭಯಪಟ್ಟು ಜೀವಿಸಿರಿ ಮತ್ತು ನಮಾಝುನ್ನು ಸಂಸ್ಥಾಪಿಸಿರಿ. ನೀವು ಮುಶ್ರಿಕರಲ್ಲಿ ಸೇರಿದವರಾಗಬೇಡಿ. ಅಂದರೆ ತಮ್ಮ ಧರ್ಮವನ್ನು ಒಡೆದು ವಿಭಿನ್ನ ಪಂಗಡಗಳಾಗಿ ಮಾರ್ಪಟ್ಟವರಲ್ಲಿ. ಪ್ರತಿ ಪಂಗಡದವರೂ ಅವರ ಕೈಯಲ್ಲಿರುವುದರ ಬಗ್ಗೆ ಸಂತೋಷಪಡುತ್ತಿದ್ದಾರೆ.” (ಅರ್ರೂಮ್ 30–32)

ಇಬ್ನ್ ಕಸೀರ್(رحمه الله) ಹೇಳುತ್ತಾರೆ:

فَأَهْـلُ الْأَدْيَـانِ قَبْلَنَا اخْتَلَفُـوا فِيمَـا بَيْنَهُمْ عَلَى آرَاءٍ وَمِلَـلٍ بَاطِلَـةٍ. وَكُلُّ فِرْقَةٍ مِنْهُـمْ تَزْعُمُ أَنَّهُمْ عَلَـى شَـيْءٍ. وَهَـذِهِ الْأُمَّةُ أَيْضًـا اخْتَلَفُـوا فِيمَا بَيْنَهُمْ عَلَـى نِحَلٍ. كُلُّهَا ضَلَالَـةٌ إِلَّا وَاحِدَةٌ. وَهُمْ أَهْلُ السُّـنَّةِ وَالْجَمَاعَةِ الْمُتَمَسِّـكُونَ بِكِتَابِ اللَّهِ وَسُـنَّةِ رَسُـولِ اللَّهِ صَلَّى اللَّهُ عَلَيْهِ وَسَـلَّمَ وَبِمَا كَانَ عَلَيْهِ الصَّـدْرُ الْأَوَّلُ مِنَ الصَّحَابَـةِ وَالتَّابِعِينَ وَأَئِمَّةِ الْمُسْـلِمِينَ فِـي قَدِيمِ الدَّهْـرِ وَحَدِيثِهِ.

“ನಮಗಿಂತ ಮುಂಚಿನ ಧರ್ಮದವರು ತಮ್ಮೊಳಗಿನ ವಿಷಯಗಳಲ್ಲಿ ಹಲವು ಅಭಿಪ್ರಾಯದವರಾಗಿ ಮತ್ತು ಮಿಥ್ಯ ವಿಶ್ವಾಸಿಗಳಾಗಿ ಭಿನ್ನರಾದರು. ಅವರಲ್ಲಿ ಪ್ರತಿಯೊಂದು ಗುಂಪು ತಾವೇ ಸತ್ಯದಲ್ಲಿರುವವರು ಎಂದು ವಾದಿಸುತ್ತಿದ್ದರು. ಅದೇ ರೀತಿ ಈ ಸಮುದಾಯವು ಕೂಡ ತಮ್ಮೊಳಗಿನ ಭಿನ್ನಾಭಿಪ್ರಾಯಗಳಿಂದಾಗಿ ಹಲವು ವಿಶ್ವಾಸಗಳೊಂದಿಗೆ ಭಿನ್ನರಾದರು. ಅವರೆಲ್ಲರೂ ದುರ್ಮಾರ್ಗದಲ್ಲಿದ್ದಾರೆ. ಒಂದೇ ಒಂದು ಪಂಗಡದ ಹೊರತು. ಅವರು ಅಹ್ಲುಸ್ಸುನ್ನ ವಲ್ ಜಮಾಅ. ಅಲ್ಲಾಹನ ಗ್ರಂಥ ಮತ್ತು ಪ್ರವಾದಿ(ﷺ) ಯವರ ಸುನ್ನತ್ತನ್ನು ಬಿಗಿಯಾಗಿ ಹಿಡಿದುಕೊಂಡವರು. ಸಹಾಬಾಗಳು, ತಾಬಿಊಗಳು ಮುಂತಾದ ಇಸ್ಲಾಮಿನ ಪ್ರಥಮ ತಲೆಮಾರುಗಳಲ್ಲಿ ಜೀವಿಸಿದವರು ಮತ್ತು ಹಿಂದಿನ ಕಾಲದಲ್ಲೂ ಈಗಿನ ಕಾಲದಲ್ಲೂ ಮುಸ್ಲಿಮ್ ನೇತಾರರು ಯಾವ ವಿಶ್ವಾಸವನ್ನು ಹೊಂದಿದ್ದರೋ ಅದೇ ವಿಶ್ವಾಸದಲ್ಲಿರುವವರು.”

ಅನ್ಯೋನ್ಯ ಸಂಬಂಧಗಳು ಹಾಳಾಗುವುದೇ ಒಡಕು, ಭಿನ್ನಾಭಿಪ್ರಾಯ ಮತ್ತು ವೈಫಲ್ಯಗಳಿಗೆ ಕಾರಣವಾಗುತ್ತದೆ. ಇದರಿಂದಾಗಿ ಶತ್ರುಗಳು ಮುಸಲ್ಮಾನರ ಮೇಲೆ ಅಧಿಕಾರ ಚಲಾಯಿಸುವುದನ್ನು ಮತ್ತು ಮುಸಲ್ಮಾನರನ್ನು ಸೋಲಿಸುವುದನ್ನು ಮುಂದುವರಿಸುತ್ತಾರೆ. ಭಿನ್ನತೆಯ ಬಗ್ಗೆ ಅಲ್ಲಾಹು(ﷻ) ನಮ್ಮನ್ನು ಎಚ್ಚರಿಸುತ್ತಾ ಹೇಳುತ್ತಾನೆ.

﴿وَأَطِيعُوا۟ ٱللَّهَ وَرَسُولَهُۥ وَلَا تَنَـٰزَعُوا۟ فَتَفْشَلُوا۟ وَتَذْهَبَ رِيحُكُمْ ۖ وَٱصْبِرُوٓا۟ ۚ إِنَّ ٱللَّهَ مَعَ ٱلصَّـٰبِرِينَ ﴿٤٦﴾﴾

"ನೀವು ಅಲ್ಲಾಹನನ್ನು ಮತ್ತು ಅವನ ರಸೂಲರನ್ನು ಅನುಸರಿಸಿರಿ. ಭಿನ್ನರಾಗಬೇಡಿ. ಭಿನ್ನಾರಾದರೆ ನೀವು ವಿಫಲರಾಗುತ್ತೀರಿ ಮತ್ತು ನಿಮ್ಮ ಸ್ಫೂರ್ತಿ ಹೊರಟುಹೋಗುತ್ತದೆ. ತಾಳ್ಮೆ ವಹಿಸಿರಿ. ಖಂಡಿತವಾಗಿಯೂ ಅಲ್ಲಾಹು ತಾಳ್ಮೆ ವಹಿಸುವವರೊಡನೆ ಇದ್ದಾನೆ." (ಅಲ್‌ಅನ್ಫಾಲ್ 46)

ಅಬುದ್ದರ್ದಾಅ್(ؓ) ವರದಿ ಮಾಡಿದ ಸಹೀಹ್ ಹದೀಸೊಂದರಲ್ಲಿ ಹೀಗಿದೆ:

قَالَ رَسُــولُ اللَّــهِ صَلَّى اللَّــهُ عَلَيْهِ وَسَــلَّمَ: «أَلَا أُخْبِرُكُــمْ بِأَفْضَــلَ مِنْ دَرَجَــةِ الصَّــلَاةِ وَالصِّيَامِ وَالصَّدَقَــةِ؟» قَالُوا: بَلَــى. قَالَ: «إِصْــلَاحُ ذَاتِ الْبَيْــنِ. وَفَسَــادُ ذَاتِ الْبَيْنِ هِــيَ الْحَالِقَةُ».

ಅಲ್ಲಾಹನ ಸಂದೇಶವಾಹಕರು(ﷺ) ಹೇಳಿದರು: "ನಮಾಝ್, ಉಪವಾಸ ಮತ್ತು ದಾನಧರ್ಮಕ್ಕಿಂತಲೂ ಶ್ರೇಷ್ಠವಾದ ಸ್ಥಾನವನ್ನು ಹೊಂದಿರುವ ಒಂದು ವಿಷಯದ ಬಗ್ಗೆ ನಾನು ನಿಮಗೆ ತಿಳಿಸಿಕೊಡಲೇ?" ಸಹಾಬಾಗಳು ಹೇಳಿದರು: "ತಿಳಿಸಿಕೊಡಿ". ಪ್ರವಾದಿ(ﷺ) ಯವರು ಹೇಳಿದರು: "ಅನ್ಯೋನ್ಯ ಸಂಬಂಧ ಸುಧಾರಣೆ. ಅನ್ಯೋನ್ಯ ಸಂಬಂಧವನ್ನು ಹಾಳು ಮಾಡುವುದು ಬೋಳಿಸುವ ಕೃತ್ಯವಾಗಿದೆ."

(ಇದನ್ನು ಅಲ್‌ಬುಖಾರಿ ತಮ್ಮ ಅಲ್‌ಅದಬುಲ್ ಮುಫ್ರದ್‌ನಲ್ಲಿ (391), ಅಹ್ಮದ್ ತಮ್ಮ ಮುಸ್ನದ್‌ನಲ್ಲಿ (27508), ಅಬೂದಾವೂದ್ ತಮ್ಮ ಸುನನ್‌ನಲ್ಲಿ (4921) ಮತ್ತು ಅತ್ತಿರ್ಮಿದಿ ತಮ್ಮ ಜಾಮಿಅ್‌ನಲ್ಲಿ (2509) ವರದಿ ಮಾಡಿದ್ದಾರೆ. ಈ ಹದೀಸನ್ನು ಅಲ್‌ಅಲ್ಬಾನಿ (ؒ) ತಮ್ಮ ಸಹೀಹುಲ್ ಅದಬಿಲ್ ಮುಫ್ರದ್ - ಬಾಬ್ ಇಸ್ಲಾಹು ಝ್ಹಾತಿಲ್ ಬೈನ್ ನಲ್ಲಿ (391/302) ಮತ್ತು ಸಹೀಹುಲ್ ಜಾಮಿಇ ಸ್ಸಗೀರ್ ನಲ್ಲಿ (1/506 ಹದೀಸ್ ನಂ 2595) ಸಹೀಹ್ ಎಂದಿದ್ದಾರೆ.)

ಅಝ್ಝುಬೈರ್ ಇಬ್ನುಲ್ ಅವ್ವಾಮ್(ؓ) ರವರು ಪ್ರವಾದಿ(ﷺ) ಯವರಿಂದ ವರದಿ ಮಾಡುತ್ತಾರೆ.

«دَبَّ إِلَيْكُمْ دَاءُ الْأُمَمِ قَبْلَكُمْ. الْحَسَــدُ وَالْبَغْضَاءُ. هِيَ الْحَالِقَةُ. لَا أَقُولُ تَحْلِقُ الشَّــعَرَ. وَلَكِنْ تَحْلِقُ الدِّينَ. وَالَّذِي نَفْسِــي بِيَدِهِ! لَا تَدْخُلُوا الْجَنَّةَ حَتَّى تُؤْمِنُوا. وَلَا تُؤْمِنُوا حَتَّى تَحَابُّــوا. أَفَلَا أُنَبِّئُكُمْ بِمَا يُثَبِّتُ ذَاكُمْ لَكُمْ؟ أَفْشُــوا السَّلَامَ بَيْنَكُمْ».

"ನಿಮಗಿಂತ ಮುಂಚಿನ ಸಮುದಾಯಗಳ ರೋಗ ನಿಮ್ಮ ಬಳಿಗೂ ತೆವಳಿಕೊಂಡು ಬರುತ್ತಿದೆ. ಅದು ಅಸೂಯೆ ಮತ್ತು ವಿದ್ವೇಷ. ಅದು ಬೋಳಿಸುವ ವಸ್ತುವಾಗಿದೆ. ನಾನು ಹೇಳುವುದು ಅದು ತಲೆಯನ್ನು ಬೋಳಿಸುತ್ತದೆ ಎಂದಲ್ಲ, ಬದಲಾಗಿ ಧರ್ಮವನ್ನು ಬೋಳಿಸುತ್ತದೆ. ನನ್ನ ಆತ್ಮ ಯಾರ ಕೈಯಲ್ಲಿದೆಯೋ ಅವನ ಮೇಲಾಣೆ! ನೀವು ವಿಶ್ವಾಸವಿಡುವ ತನಕ ಸ್ವರ್ಗವನ್ನು ಪ್ರವೇಶಿಸುವುದಿಲ್ಲ. ನೀವು ಅನ್ಯೋನ್ಯ ಪ್ರೀತಿಸುವ ತನಕ ವಿಶ್ವಾಸವಿಡುವುದಿಲ್ಲ. ಈ ಪ್ರೀತಿಯನ್ನು ನಿಮ್ಮಲ್ಲಿ ಸ್ಥಾಪಿಸುವ ಒಂದು ವಿಷಯದ ಬಗ್ಗೆ ನಾನು ತಿಳಿಸಿಕೊಡಲೇ? ನಿಮ್ಮ ನಡುವೆ ಸಲಾಮ್ ಹೇಳುವುದನ್ನು ವ್ಯಾಪಕಗೊಳಿಸಿರಿ."

(ಇದನ್ನು ಅಹ್ಮದ್ ತಮ್ಮ ಮುಸ್ನದ್‌ನಲ್ಲಿ (1430), ಅತ್ತಿರ್ಮಿದಿ ತಮ್ಮ ಸುನನ್‌ನಲ್ಲಿ (2510) ಮತ್ತು ಅಲ್‌ಬುಖಾರಿ ತಮ್ಮ ಅಲ್‌ಅದಬುಲ್ ಮುಫ್ರದ್‌ನಲ್ಲಿ (260) ವರದಿ ಮಾಡಿದ್ದಾರೆ. ಅಲ್‌ಅಲ್ಬಾನಿ(ؒ) ತಮ್ಮ ಸಹೀಹು ತ್ತರ್ಗೀಬಿ ವತ್ತರ್ಹೀಬ್ ನಲ್ಲಿ (3/44) ಇದನ್ನು ಹಸನ್ ಲಿಗೈರಿಹಿ ಎಂದಿದ್ದಾರೆ.)

ಆದ್ದರಿಂದ ಎಲ್ಲ ಸಲಫಿಗಳೂ ತಮ್ಮ ನಡುವಿನ ಭಿನ್ನತೆಗಳನ್ನು ಮುಗಿಸಲು ಈ ಆಯತ್ ಮತ್ತು ಹದೀಸ್‌ಗಳನ್ನು ತಮ್ಮ ಕಣ್ಣ ಮುಂಭಾಗದಲ್ಲಿ ಇಡಬೇಕು. ಏಕೆಂದರೆ ಖಂಡಿತವಾಗಿಯೂ ಭಿನ್ನತೆ ಕೆಡುಕಾಗಿದೆ. ■

# ಪತಿ ಪತ್ನಿಯ ಹೃದಯವನ್ನು ಗೆಲ್ಲುವುದು ಹೇಗೆ?

—2—

**ಅಡಿಪಾಯ!!**

ಪ್ರಾರಂಭದಲ್ಲಿ ನಾವು ಅತ್ಯಂತ ಮಹತ್ವದ ವಿಷಯವನ್ನು ತಿಳಿಸುತ್ತಿದ್ದೇವೆ. ಇದನ್ನು ಸರಿಯಾಗಿ ಅರ್ಥೈಸಿಕೊಳ್ಳುವುದರಲ್ಲೇ ಯಶಸ್ವೀ ದಾಂಪತ್ಯ ಜೀವನದ ರಹಸ್ಯವು ಅಡಗಿದೆ. ಯಾರು ಈ ಅಡಿಪಾಯವನ್ನು ಸಮರ್ಪಕವಾಗಿ ಕಟ್ಟಲು, ಅರ್ಥಾತ್ ವಿಷಯವನ್ನು ಮನವರಿಕೆ ಮಾಡಿಕೊಂಡು ಕಾರ್ಯರೂಪಕ್ಕೆ ತರುವ ಪ್ರಯತ್ನ ಪ್ರಾರಂಭಿಸುತ್ತಾರೋ ಅವರ ದಾಂಪತ್ಯ ಜೀವನದ ರಸನಿಮಿಷಗಳು ಆರಂಭವಾದುವೆಂದೇ ಅರ್ಥ. ಅವನು ಹೆಚ್ಚಿನ ಮಾನಸಿಕ ಸಂಘರ್ಷದಿಂದ ಪಾರಾದಂತೆಯೇ ಸರಿ. ಆ ಒಂದು ಅತ್ಯಂತ ಸೂಕ್ಷ್ಮ ಆದರೆ ಅತ್ಯಂತ ಮಹತ್ವವಿರುವ ವಿಷಯವಾಗಿದೆ "ಗಂಡು ಮತ್ತು ಹೆಣ್ಣಿನಲ್ಲಿರುವ ಪ್ರಾಕೃತಿಕವಾದ ವ್ಯತ್ಯಾಸ".

ದಾಂಪತ್ಯ ಜೀವನದ ಹೊಸ್ತಿಲಿಗೆ ಪ್ರವೇಶಿಸಲಿರುವವರು, ಈಗಾಗಲೇ ಪ್ರವೇಶಿಸಿರುವವರು ದಾಂಪತ್ಯ ಜೀವನದಲ್ಲಿ ಪತ್ನಿಯೊಂದಿಗೆ ಹೊಂದಾಣಿಕೆ ಸಾಧ್ಯವಾಗದೆ ಚಡಪಡಿಸುತ್ತಿರುವವರು, ತಲೆಯ ಮೇಲೆ ಕೈ ಹೊತ್ತುಕೊಂಡು ಗಂಟೆಕಟ್ಟಳೆ ಆಲೋಚಿಸುತ್ತಾ ಏನಾದರೂ ಒಂದು ಪರಿಹಾರೋಪಾಯಕ್ಕಾಗಿ ಹಾತೊರೆಯುವವರು ಎಲ್ಲರೂ ತಮ್ಮ ದಾಂಪತ್ಯ ಜೀವನದಲ್ಲಿ ಹರ್ಷೋಲ್ಲಾಸದ ಹೊನಲು ಹರಿಯುವಂತೆ ಮಾಡಲು ನಿತ್ಯ ಜೀವನದಲ್ಲಿ ಸುಖ–ಸಂತೋಷದ ಮೊಗ್ಗು ಅರಳುತ್ತಿರುವಂತೆ ಮಾಡಲು ಈ 'ಪ್ರಾಕೃತಿಕವಾದ ವ್ಯತ್ಯಾಸ' ವನ್ನು ಗರಿಷ್ಠ ಸಾಧ್ಯ ಅರ್ಥೈಸಿಕೊಂಡು ನಡೆಯಬೇಕಾಗಿದೆ.

ಬಹುಷ ನಾವು ಈ ವಿಷಯದ ಕುರಿತು ತೋರುವ ಅವಗಣನೆಯೇ ಸಮಸ್ಯೆಗೆ ಮೂಲ ಕಾರಣವಾಗಿರಬಹುದು. ಸ್ತ್ರೀಯ ಪ್ರಕೃತಿ ಮತ್ತು ಪುರುಷನ ಪ್ರಕೃತಿ ಭಿನ್ನವಾಗಿದೆ. ಸುಖ ಮತ್ತು ಸಂತೃಪ್ತ ಜೀವನಕ್ಕೆ ಅವರಿಬ್ಬರೂ ಹೊಂದಿಕೊಂಡಿರಬೇಕಾದುದು ಅನಿವಾರ್ಯವಾಗಿದೆ. ಈ ಒಂದು ವಿಷಯದಿಂದ ನಮ್ಮ ಸಮಸ್ಯೆಗಳನ್ನು ನಾವು ಹೇಗೆ ಪರಿಹರಿಸಿಕೊಳ್ಳುವುದು?

ಪ್ರೀತಿಯ ಓದುಗರೇ! ಈ ವಿಷಯಕ್ಕೆ ಇಷ್ಟು ಮಹತ್ವವಿರದೇ ಇದ್ದಿದ್ದರೆ ನಾವು ಇದನ್ನು "ಪತಿ ಪತ್ನಿಯ ಹೃದಯವನ್ನು ಗೆಲ್ಲುವುದು ಹೇಗೆ?" ಎಂಬ ಪುಸ್ತಕದ ಆರಂಭದಲ್ಲೇ ಇದನ್ನು ಪ್ರಸ್ತಾಪಿಸುತ್ತಿರಲಿಲ್ಲ. ಬನ್ನಿ, ನಾವೀಗ ಈ 'ಪ್ರಾಕೃತಿಕವಾದ ವ್ಯತ್ಯಾಸ' ದಿಂದ ಏನೆಲ್ಲಾ ಸಂಭವಗಳು ಉಂಟಾಗುತ್ತದೆನ್ನುವುದನ್ನು ಅವಲೋಕಿಸೋಣ.

1. ಅಭ್ಯಾಸ–ಹವ್ಯಾಸ, ರೀತಿ–ನೀತಿ, ವರ್ತನೆ–ನಡವಳಿಕೆಯಲ್ಲಿರುವ ವ್ಯತ್ಯಾಸ. ಪುರುಷನ ಮಾತು ಮತ್ತು ವರ್ತನೆಗೂ ಸ್ತ್ರೀಯ ಮಾತು ಮತ್ತು ವರ್ತನೆಗೂ ವ್ಯತ್ಯಾಸ ಇದೆ. ಪತಿಯು ಪತ್ನಿಯಿಂದ ಪುರುಷರಿಗಿರುವಂತಹಾ ಅಭ್ಯಾಸ–ಹವ್ಯಾಸಗಳನ್ನು, ಮಾತು ಮತ್ತು ವರ್ತನೆಗಳನ್ನು ನಿರೀಕ್ಷಿಸಿದರೆ ಅವಳು ಅವನ ನಿರೀಕ್ಷೆಯನ್ನು ತಲುಪಲಾರಳು. ಅದೇ ಪ್ರಕಾರ ಪತ್ನಿ ತನ್ನ ಪತಿಯಿಂದ ಸ್ತ್ರೀ ಸಹಜವಾದ ಮಾತು–ವರ್ತನೆ, ಅಭ್ಯಾಸ–ಹವ್ಯಾಸಗಳನ್ನು ನಿರೀಕ್ಷಿಸಿದರೆ ಅವನೂ ಅವಳ ನಿರೀಕ್ಷೆಗೆ ಪೂರ್ತಿಯಾಗಿ ಸ್ಪಂದಿಸಲಾರನು.

2. ಪತ್ನಿಯೊಂದಿಗೆ ಅವಳ ಪ್ರಕೃತಿಗೆ ವ್ಯತಿರಿಕ್ತವಾದಂತಹಾ ಬೇಡಿಕೆಗಳನ್ನಿಟ್ಟುಕೊಂಡು ಅದನ್ನು ನಿರೀಕ್ಷಿಸುತ್ತಾ ನಿರೀಕ್ಷಿಸುತ್ತಾ ಹತಾಶನಾಗಿ ಜೀವನದಲ್ಲಿ ಜಿಗುಪ್ಸೆ ತಾಳುವುದು.

3. ತಿಳುವಳಿಕೆಯಲ್ಲಿರುವ ವ್ಯತ್ಯಾಸ. ನಾವು ಪುರುಷರು ನಮ್ಮ ಸ್ನೇಹಿತರಿಗೆ ಯಾವುದಾದರೂ ಒಂದು ವಿಷಯವನ್ನು ನಮ್ಮ ಪುರುಷ ಸಹಜವಾದ ರೀತಿಯಲ್ಲಿ ಮನವರಿಕೆ ಮಾಡಿಕೊಡು-ತ್ತೇವೆ. ಅವರು ಕೂಡಾ ಪುರುಷ ಸಹಜವಾದ ರೀತಿಯಲ್ಲೇ ಅದನ್ನು ಅಂಗೀಕರಿಸುತ್ತಾರೆ. ಸ್ತ್ರೀಯರು ಅವರ ಗೆಳತಿಯ-ರೊಂದಿಗೂ ಹೀಗೆ. ಇಲ್ಲಿ ಪತಿಯು ತನ್ನ ಪತ್ನಿಯೊಂದಿಗೆ ಪುರುಷರಿಗೆ ಮನವರಿಕೆ ಮಾಡಿಕೊಡುವ ಶೈಲಿಯನ್ನು ಉಪಯೋಗಿಸಿದರೆ ಬಹುಷಃ ಅವಳು ಅದನ್ನು ಅರಗಿಸಿಕೊ-ಳ್ಳಲಾರಳು. ಆಗ ಅದಕ್ಕಾಗಿ ಅವನು ಅವಳ ಮೇಲೆ ರೇಗಾಡಲು ತೊಡಗಿದರೆ, ಪತ್ನಿ ತನ್ನ ಮಾತನ್ನು ಅರ್ಥ ಮಾಡಿಕೊಳ್ಳುವುದಿ-ಲ್ಲವೆಂದು ದೂರಿಕೊಳ್ಳತೊಡಗಿದರೆ ಸಮಸ್ಯೆ ಸೃಷ್ಟಿಯಾಗುವು-ದಲ್ಲದೆ ಪರಿಹಾರವಾಗಲು ಸಾಧ್ಯವೇ?

4. ಸಂತೋಷಗೊಳ್ಳುವ ವಿಧಿ–ವಿಧಾನದಲ್ಲಿ ವ್ಯತ್ಯಾಸ. ಪತಿಯಾದವನು ತನ್ನ ಸ್ನೇಹಿತರನ್ನು, ಸಹಪಾಠಿಗಳ-ನ್ನು, ಸಹೋದ್ಯೋಗಿಗಳನ್ನು ಸಂತೋಷಪಡಿಸುವ ರೀತಿ ಮತ್ತು ಶೈಲಿಯಿಂದಲೇ ಮನೆಯಲ್ಲಿ ತನ್ನ ಪತ್ನಿಯನ್ನೂ ಸಂತೋಷಪಡಿಸಬಹುದೆಂಬ ಪ್ರಯತ್ನದಲ್ಲಿ ಅವನು ಯಶಸ್ವಿಯಾಗಲೇಬೇಕೆಂದಿಲ್ಲ.

ಅಲ್ಲಾಹನ ಸಂದೇಶವಾಹಕರು(ﷺ) ಈ ಪ್ರಾಕೃತಿಕವಾದ ವ್ಯತ್ಯಾಸ-ವನ್ನು ಈ ರೀತಿ ವಿವರಿಸಿದ್ದಾರೆ.

عَنْ أَبِـي هُرَيْرَةَ، عَنِ النَّبِيِّ صَلَّى اللَّهُ عَلَيْهِ وَسَـلَّمَ قَـالَ: «مَـنْ كَانَ يُؤْمِنُ بِاللَّـهِ وَالْيَـوْمِ الْآخِرِ فَلَا يُؤْذِي جَارَهُ. وَاسْـتَوْصُوا بِالنِّسَـاءِ خَيْـرًا. فَإِنَّهُنَّ خُلِقْنَ مِـنْ ضِلَعٍ. وَإِنَّ أَعْوَجَ شَـيْءٍ فِـي الضِّلَعِ أَعْلَاهُ. فَإِنْ ذَهَبْـتَ تُقِيمُهُ كَسَـرْتَهُ. وَإِنْ تَرَكْتَهُ لَمْ يَزَلْ أَعْوَجَ. فَاسْـتَوْصُوا بِالنِّسَـاءِ خَيْرًا».

ಅಬೂಹುರೈರ(ؓ) ವರದಿ ಮಾಡಿರುವ ಹದೀಸಿನಲ್ಲಿ ಪ್ರವಾದಿ(ﷺ) ಹೇಳುತ್ತಾರೆ. "ಯಾರು ಅಲ್ಲಾಹನ ಮೇಲೆ ಮತ್ತು ಅಂತ್ಯದಿನದ ಮೇಲೆ ವಿಶ್ವಾಸವಿಡುತ್ತಾರೋ ಅವರು ತಮ್ಮ ನೆರೆಹೊರೆಯವರ-ನ್ನು ಸತಾಯಿಸದಿರಲಿ. ನಾನು ನಿಮಗೆ ಸ್ತ್ರೀಯರೊಂದಿಗೆ ಸದ್ವರ್ತನೆ ತೋರಬೇಕೆಂದು ಆಜ್ಞಾಪೂರ್ವಕ ಉಪದೇಶಿಸುತ್ತಿದ್ದೇನೆ. ಏಕೆಂದರೆ ಸ್ತ್ರೀಯರನ್ನು ಪಕ್ಕೆಲುಬಿನಿಂದ ಸೃಷ್ಟಿಸಲಾಗಿದೆ. ಪಕ್ಕೆಲುಬು ಮೇಲ್ಗಡೆಗೇ ಹೆಚ್ಚು ಬಾಗಿಕೊಂಡಿರುತ್ತದೆ. ನೀವೇನಾದರೂ ಅದನ್ನು ಒಮ್ಮೆಗೇ ನೇರಗೊಳಿಸಬೇಕೆಂದು ಬಯಸಿದರೆ ಅದನ್ನು ನೀವು ಮುರಿದು ಬಿಡುತ್ತೀರೇ ಹೊರತು ಅದು ನೇರವಾಗಲಾರದು. ನೀವೇನಾದರೂ ಅದನ್ನು ಹಾಗೇ ಬಿಟ್ಟರೆ ಒಳ್ಳೆಯದು. ಅದು ಹಾಗೇ ಇರುವುದು. ನಾನು ನಿಮಗೆ ಆಜ್ಞಾಪೂರ್ವಕ ಉಪದೇಶಿಸುತ್ತಿದ್ದೇನೆ. ಸ್ತ್ರೀಯರೊಂದಿಗೆ ಸದ್ವರ್ತನೆ ತೋರಿರಿ." (ಸಹೀಹ್ ಬುಖಾರಿ)

ಪ್ರವಾದಿ(ﷺ) ರವರು ಎಷ್ಟೊಂದು ಮನೋಹರ ರೀತಿಯಲ್ಲಿ ಸ್ತ್ರೀ–ಪುರುಷರ ನಡುವಿನ ಪ್ರಾಕೃತಿಕವಾದ ವ್ಯತ್ಯಾಸವನ್ನು ಈ ಹದೀಸಿನಲ್ಲಿ ಪ್ರಸ್ತಾವಿಸಿದ್ದಾರೆ ನೋಡಿ. ಈ ವಕ್ರತೆಯು ಒಂದು ಕಡೆ ಪ್ರಾಕೃತಿಕ-ವಾದ ನಡವಳಿಕೆಗಳ ಕಡೆಗೆ ಬೆಳಕು ಚೆಲ್ಲಿದರೆ ಇನ್ನೊಂದು ಕಡೆ ಈ ಪ್ರಾಕೃತಿಕವಾದ ವ್ಯತ್ಯಾಸವು ಅವರ ವಿಶೇಷತೆಯೂ ಹಿರಿಮೆಯೂ ಆಗಿದೆ ಎಂಬುದನ್ನೂ ಸೂಚಿಸುತ್ತದೆ.

ಅವರ ಮಾತು, ವರ್ತನೆ, ಕಾರ್ಯವೈಖರಿಯಲ್ಲಿ ಒಂದು ರೀತಿಯ ಮೃದುತ್ವ ಇರುತ್ತದೆ. ಒಂದು ವೇಳೆ ಅದು ಇಲ್ಲದಂತೆ ಮಾಡಿದರೆ ಅವಳಲ್ಲಿ ಸ್ತ್ರೀತನವೇ ಇಲ್ಲದಂತಾಗುವುದು. ಅವಳ ಅಭ್ಯಾಸ–ಹವ್ಯಾಸಗಳಲ್ಲಿ ಒಂದು ರೀತಿಯ ವಕ್ರತೆ ಇರುವುದು. ಅದನ್ನು ನೇರಗೊಳಿಸಲು ಪ್ರಯತ್ನಿಸುವುದೇ ಬೇಡವೆಂದು ಅಲ್ಲಾಹನ ಸಂದೇಶವಾಹಕರು(ﷺ) ನಮ್ಮನ್ನು ತಡೆದಿರುವರು. ಏಕೆಂದರೆ ಅದು ನೇರವಾಗುವುದಿಲ್ಲ. ನೀವು ಹೆಚ್ಚು ಬಲವಂತ ಮಾಡಿದರೆ ಅದು ಮುರಿದು ಹೋಗಬಹುದು. ಅರ್ಥಾತ್ ವಿಷಯವು ತಲಾಕ್‌ನ ತನಕವೂ ಹೋಗಿ ತಲುಪಬಹುದು. ಪರಿಸ್ಥಿತಿ ಇನ್ನಷ್ಟು ಹದೆಗೆಡಬಹುದು.

ಅವಳ ಆ ಪ್ರಾಕೃತಿಕವಾದ ವಕ್ರತೆಯನ್ನು ಇದ್ದ ಹಾಗೇ ನಾವು ಸ್ವೀ-ಕರಿಸಬೇಕು. ಹೇಗೆ ಗುಲಾಬಿ ಹೂವಿನೊಂದಿಗೆ ಅದರ ಮುಳ್ಳನ್ನು ಸ್ವೀಕರಿಸಿಕೊಳ್ಳುತ್ತೇವೋ ಹಾಗೆ. ಯಾವ ರೀತಿಯಲ್ಲಿ ಎಷ್ಟು ಸಂಪತ್ತು ವ್ಯಯಿಸಿದರೂ ಮುಳ್ಳುಗಳಿಲ್ಲದ ಗಿಡದ ಗುಲಾಬಿಯನ್ನು ತರಲು ಸಾಧ್ಯವಿಲ್ಲವೋ ಅದೇ ರೀತಿಯಲ್ಲಿ ವಕ್ರತೆಯಿಲ್ಲದ ಹೆಣ್ಣನ್ನು ತರಲು ನಿಮ್ಮಿಂದ ಸಾಧ್ಯವಿಲ್ಲ. ಗುಲಾಬಿಯ ಸೊಬಗು–ಸೌಂದರ್ಯ, ಸುವಾಸನೆ, ಮೃದು, ಮಾಧುರ್ಯತೆಯನ್ನು ಅನುಭವಿಸಬೇಕೆಂದರೆ ಅದರ ತಳದಲ್ಲಿರುವ ಮುಳ್ಳನ್ನು ನೀವು ಸಹಿಸಿಕೊಳ್ಳಲೇ ಬೇಕಾಗುತ್ತದೆ. ಇದೇ ಪ್ರಕೃತಿ ಪರವಾದ ಭಿನ್ನತೆಯ-ನ್ನು ಅಲ್ಲಾಹನ ಸಂದೇಶವಾಹಕರು(ﷺ) ಇನ್ನೊಂದು ಹದೀಸಿನಲ್ಲಿ ಈ ರೀತಿ ವಿವರಿಸಿದ್ದಾರೆ.

عَنْ أَبِي سَـعِيدٍ الْخُدْرِيِّ قَالَ: خَرَجَ رَسُـولُ اللَّهِ صَلَّـى اللَّهُ عَلَيْهِ وَسَـلَّمَ فِي أَضْحَـى أَوْ فِطْرٍ إِلَى الْمُصَلَّـى. فَمَرَّ عَلَـى النِّسَـاءِ فَقَالَ: «يَا مَعْشَـرَ النِّسَـاءِ! تَصَدَّقْنَ، فَإِنِّي أُرِيتُكُنَّ أَكْثَـرَ أَهْلِ النَّارِ». فَقُلْـنَ: وَبِمَ يَا رَسُـولَ اللَّهِ! قَالَ: «تُكْثِـرْنَ اللَّعْنَ وَتَكْفُرْنَ الْعَشِـيرَ. مَـا رَأَيْتُ مِنْ نَاقِصَـاتِ عَقْلٍ وَدِينٍ أَذْهَبَ لِلُبِّ الرَّجُلِ الْحَـازِمِ مِنْ إِحْدَاكُنَّ». قُلْنَ: وَمَـا نُقْصَانُ دِينِنَـا وَعَقْلِنَا يَا رَسُـولَ اللَّهِ؟ قَالَ: «أَلَيْسَ شَـهَادَةُ الْمَـرْأَةِ مِثْلَ نِصْفِ شَـهَادَةِ الرَّجُـلِ؟» قُلْنَ: بَلَى. قَـالَ: «فَذَلِكِ مِـنْ نُقْصَانِ عَقْلِهَـا. أَلَيْسَ إِذَا حَاضَتْ لَمْ تُصَـلِّ وَلَمْ تَصُمْ؟» قُلْـنَ: بَلَى. قَـالَ: «فَذَلِكِ مِنْ نُقْصَـانِ دِينِهَا».

ಅಬೂ ಸಈದ್ ಖುದ್ರಿ(ﷺ) ಹೇಳುತ್ತಾರೆ. ಪ್ರವಾದಿ(ﷺ) ರವರು ಬಕ್ರೀದ್ ಅಥವಾ ರಮದಾನಿನ ಈದ್ ಹಬ್ಬದ ದಿನ ಈದ್ಗಾದೆಡೆಗೆ ಹೊರಟರು. (ದಾರಿಯಲ್ಲಿ) ಮಹಿಳೆಯರು ಸಿಕ್ಕಿದರು. ಪ್ರವಾದಿ (ﷺ) ಹೇಳಿದರು. "ಮಹಿಳೆಯರೇ! ದಾನ ಮಾಡಿರಿ! ನನಗೆ (ಪುರುಷರಿಗಿಂತ) ಹೆಚ್ಚಾಗಿ ಸ್ತ್ರೀಯರೇ ನರಕದಲ್ಲಿರುವುದನ್ನು ತೋರ್ಪಡಿಸಲಾಗಿದೆ." ಮಹಿಳೆಯರು ಕೇಳಿದರು. "ಓ ಅಲ್ಲಾಹನ ಸಂದೇಶವಾಹಕರೇ! ಇದಕ್ಕೆ ಕಾರಣವೇನು?" ಪ್ರವಾದಿ(ﷺ) ಹೇಳಿದರು. "ನೀವು ಶಾಪ ಹಾಕುವುದು ಜಾಸ್ತಿ ಮತ್ತು ನಿಮ್ಮ ಪತಿಯಂದಿರನ್ನು ನೀವು ನಿರಾಕರಿಸುತ್ತೀರಿ. ನೀವು ಬುದ್ಧಿ ಮತ್ತು ದೀನಿನಲ್ಲಿ ಅಪೂರ್ಣರಾಗಿದ್ದು, ಬುದ್ಧಿ ಮತ್ತು ವಿವೇಕಪೂರ್ಣರಾದ ಪುರುಷರನ್ನು ನೀವು ಮರಳುಗೊಳಿಸುವಂತೆ ಇನ್ನಾರೂ ಮರಳುಗೊಳಿಸುವುದಿಲ್ಲ." ಅವರು ಕೇಳಿದರು. "ಅಲ್ಲಾಹನ ಸಂದೇಶವಾಹಕರೇ! ನಮ್ಮ ದೀನ್ ಮತ್ತು ಬುದ್ಧಿಯಲ್ಲಿ ಏನು ಕೊರತೆಯಿದೆ?" ಪ್ರವಾದಿ(ﷺ) ಹೇಳಿದರು. "ನೋಡಿ! ಮಹಿಳೆಯ ಸಾಕ್ಷಿ ಪುರುಷರ ಅರ್ಧ ಸಾಕ್ಷಿಗೆ ಸಮಾನವಾಗಿದೆ ಅಲ್ಲವಾ?" ಅವರು ಹೇಳಿದರು. "ಅದು ಸರಿ. ಅದರಲ್ಲಿ ಸಂಶಯವಿಲ್ಲ." ಪ್ರವಾದಿ(ﷺ) ಹೇಳಿದರು. "ಇದು ಅವಳ ಬುದ್ಧಿಯಲ್ಲಿರುವ ಕೊರತೆಯನ್ನು ತೋರಿಸುತ್ತದೆ. ಇನ್ನು ನೋಡಿ! ನೀವು ನಿಮ್ಮ ಋತುಚಕ್ರದ ದಿನಗಳಲ್ಲಿ ನಮಾಝ್ ನಿರ್ವಹಿಸುವುದಿಲ್ಲ. ಉಪವಾಸ ಅನುಷ್ಠಿಸುವುದಿಲ್ಲ. ಇದು ನಿಮ್ಮ ಧರ್ಮದಲ್ಲಿರುವ ಕೊರತೆಯನ್ನು ಸೂಚಿಸುತ್ತದೆ." (ಸಹೀಹ್ ಬುಖಾರಿ)

ಪ್ರವಾದಿ(ﷺ) ಸರ್ವಲೋಕಕ್ಕೆ ಕರುಣೆಯಾಗಿ ಬಂದವರು. ಇವರಲ್ಲಿದ್ದ ಪ್ರೀತಿ–ಕರುಣೆ ಇನ್ನಾರ ಬಳಿಯೂ ಇರುವುದಿಲ್ಲ. ಅವರು ಈ ಮಾತನ್ನು ಸ್ತ್ರೀಯರನ್ನು ಹೀಯಾಳಿಸಿಕೊಂಡು ಹೇಳಿದ್ದಲ್ಲ. ಅವರ ಉದ್ದೇಶ ಸ್ತ್ರೀಯರನ್ನು ಅಣಕಿಸುವುದು ಅಥವಾ ನೋಯಿಸುವುದಲ್ಲ. ಬದಲಾಗಿ ಸಾಮಾನ್ಯವಾಗಿ ಕಂಡುಬರುವ ಒಂದು ದುರಭ್ಯಾಸದ ಕುರಿತು ಅವರನ್ನು ಎಚ್ಚರಿಸುವುದು ಮತ್ತು ಅವರಲ್ಲಿರುವ ಕೆಲವು ಪ್ರಾಕೃತಿಕವಾದ ದೌರ್ಬಲ್ಯಗಳನ್ನು ಅವರಿಗೆ ತಿಳಿಸಿಕೊಡುವುದಾಗಿತ್ತು. ಈ ಹದೀಸಿನ ಬಗ್ಗೆ ಆಳವಾಗಿ ಅಧ್ಯಯನ ಮಾಡುವಾಗ ಪ್ರವಾದಿ(ﷺ) ಸ್ತ್ರೀಯರ ಬಗ್ಗೆ ನಾಲ್ಕು ವಿಷಯಗಳನ್ನು ಪ್ರಸ್ತಾಪಿಸಿರುವುದು ಕಂಡುಬರುತ್ತದೆ.

1. ಶಪಿಸುವ ಮತ್ತು ದೂರಿಕೊಳ್ಳುವ ಅಭ್ಯಾಸ.
2. ಪತಿಯೊಂದಿಗೆ ಕೃತಘ್ನತೆ ಪ್ರಕಟಿಸುವುದು.
3. ದೀನ್ ಮತ್ತು ಬುದ್ಧಿಯಲ್ಲಿ ಅವರ ದೌರ್ಬಲ್ಯ.
4. ಪುರುಷರನ್ನು ಬುದ್ಧಿಯಲ್ಲಿ ಮೀರಿಸಲು ಪ್ರಯತ್ನಿಸುವುದು.

ಈ ನಾಲ್ಕು ಗುಣಗಳು ಸ್ತ್ರೀಯರಲ್ಲಿ ಪ್ರಾಕೃತಿಕವಾಗಿಯೇ ಬೆರೆತುಕೊಂಡಿದೆ. ಹೆಚ್ಚಿನ ಮಹಿಳೆಯರಲ್ಲಿ ಇದು ಸಾಮಾನ್ಯವಾಗಿ ಕಂಡುಬರುತ್ತದೆ. ಆದ್ದರಿಂದ ಪುರುಷರು ಬುದ್ಧಿ ಮತ್ತು ಯುಕ್ತಿ ಉಪಯೋಗಿಸಿ ಅವರ ಪತ್ನಿಯರಲ್ಲಿ ಸಂಸ್ಕರಣೆ ಉಂಟುಮಾಡಲು ಪ್ರಯತ್ನಿಸುತ್ತಿರಬೇಕಾಗಿದೆ. ಆದರೆ ಅವರು ಸಂಪೂರ್ಣವಾಗಿ ಈ ಅಭ್ಯಾಸ ಅಥವಾ ಗುಣಗಳಿಂದ ಮುಕ್ತರಾಗುತ್ತಾರೆಂದು ಭಾವಿಸುವಂತಿಲ್ಲ. ಸ್ತ್ರೀಯರು ದೂಷಣೆ, ಮೂದಲಿಕೆ ಮಾಡಿದಾಗಲೆಲ್ಲಾ ಇದು ಅವರ ಪ್ರಕೃತಿ ಎಂದು ತಿಳಿದು ಅದನ್ನು ಅವಗಣಿಸಬೇಕು.

ಮೊದಲೇ ತಿಳಿಸಿದಂತೆ ಗುಲಾಬಿಯೊಂದಿಗೆ ಅದರ ಮುಳ್ಳನ್ನು ಸ್ವೀಕರಿಸಿಕೊಳ್ಳಬೇಕಾಗುತ್ತದೆ. ಅದೇ ರೀತಿ ಪತಿಯಾದವನು ತನ್ನ ಸಂಪಾದನೆಯನ್ನು ಸಂಪೂರ್ಣವಾಗಿ ತನ್ನ ಪತ್ನಿ ಮತ್ತು ಮಕ್ಕಳ ಮೇಲೆ ಖರ್ಚು ಮಾಡಿದರೂ ಪತ್ನಿ ಸಂಪೂರ್ಣ ತೃಪ್ತಳಾಗುತ್ತಾಳೆಂದು ತಿಳಿಯುವಂತಿಲ್ಲ. ಏಕೆಂದರೆ ಕೃತಘ್ನತೆಯ ಮತ್ತು ಅತೃಪ್ತಿಯ ಗುಣ ಅವಳ ಪ್ರಕೃತಿಯಲ್ಲೇ ಸೇರಿಕೊಂಡಿದೆ. ತದನಂತರವೂ ಅವಳಿಂದ ಏನಾದರೂ ಮೂದಲಿಕೆ, ಆಕ್ಷೇಪ ಕೇಳಿಬಂದರೂ ಅದು ಅವಳ ಪ್ರಕೃತಿಯೆಂದು ತಿಳಿದು ಮಂದಹಾಸ ಬೀರುತ್ತಾ ಅವಳ ಮಾತನ್ನು

ಸ್ವೀಕರಿಸಬೇಕಾಗುತ್ತದೆ.

ಒಂದು ಹದೀಸಿನಲ್ಲಿ ಸ್ತ್ರೀಯರ ಈ ದೌರ್ಬಲ್ಯವನ್ನು ಪ್ರವಾದಿ(ﷺ) ಈ ರೀತಿಯಲ್ಲಿ ವಿವರಿಸಿದ್ದಾರೆ. ಇದು ಸುನನು ನಸಾಈಯಲ್ಲಿರುವ ಒಂದು ಸುದೀರ್ಘವಾದ ವರದಿಯಾಗಿದ್ದು ಅದರಲ್ಲಿ ಪ್ರವಾದಿ(ﷺ) ಗ್ರಹಣ ನಮಾಝ್ ನಿರ್ವಹಿಸಿದ ಉಲ್ಲೇಖವಿದೆ. ಬಳಿಕ ಅವರು ಖುತ್ಬಾ ನಿರ್ವಹಿಸುತ್ತಾ ಹೇಳಿದರು.

«وَرَأَيْتُ أَكْثَرَ أَهْلِهَا النِّسَاءَ». قَالُوا: لِمَ يَا رَسُولَ اللَّهِ؟ قَالَ: «بِكُفْرِهِنَّ». قِيلَ: يَكْفُرْنَ بِاللَّهِ؟ قَالَ: «يَكْفُرْنَ الْعَشِيرَ، وَيَكْفُرْنَ الْإِحْسَانَ. لَوْ أَحْسَنْتَ إِلَى إِحْدَاهُنَّ الدَّهْرَ ثُمَّ رَأَتْ مِنْكَ شَيْئًا قَالَتْ مَا رَأَيْتُ مِنْكَ خَيْرًا قَطُّ».

"ನಾನು ನರಕವನ್ನು ಕಂಡೆ. ಅದರಲ್ಲಿ ಹೆಚ್ಚಾಗಿ ಸ್ತ್ರೀಯರೇ ಇದ್ದರು." ಜನರು ಕೇಳಿದರು. "ಅಲ್ಲಾಹನ ಸಂದೇಶವಾಹಕರೇ! ಅದೇಕೆ?" ಪ್ರವಾದಿ(ﷺ) ಹೇಳಿದರು. "ಅವರ ಕೃತಘ್ನತೆಯ ಕಾರಣದಿಂದ." ಜನರು ಕೇಳಿದರು. "ಅಲ್ಲಾಹನೊಂದಿಗೆ ಕೃತಘ್ನತೆ ತೋರಿದ ಕಾರಣಕ್ಕಾಗಿಯೇ?" ಪ್ರವಾದಿ(ﷺ) ಹೇಳಿದರು. "ಅಲ್ಲ, ಅವರು ತಮ್ಮ ಪತಿಯಂದಿರಿಗೆ ಕೃತಘ್ನತೆ ತೋರುತ್ತಾರೆ. ಅವರು ತೋರುವ ಔದಾರ್ಯವನ್ನು ಅಂಗೀಕರಿಸುವುದಿಲ್ಲ. ನೀವು ನಿಮ್ಮ ಸ್ತ್ರೀಯರೊಂದಿಗೆ ಜೀವನ ಪರ್ಯಂತ ಉದಾರತೆ ತೋರಿದರೂ ನಿಮ್ಮ ಯಾವುದಾದರೂ ಕಾರ್ಯ ಅವಳಿಗೆ ಅಪ್ರಿಯವೆನಿಸಿದರೆ ಸಾಕು. ಅವಳು ಹೇಳುವಳು. ನಿಮ್ಮಿಂದ ನಾನೆಂದೂ ಒಳಿತು ಕಂಡೇ ಇಲ್ಲ. (ನೀವು ನನಗಾಗಿ ಏನೂ ಮಾಡೇ ಇಲ್ಲ.)"

ಪ್ರವಾದಿ(ﷺ) ಅತ್ಯಂತ ಸ್ಪಷ್ಟವಾದ ಪದಗಳಿಂದ ಕೆಲವು ಸ್ತ್ರೀಯರು ಜೀವನ ಪರ್ಯಂತ ಅವರಿಗೆ ಮಾಡಿದ ಉಪಕಾರವನ್ನು ಒಂದು ಕ್ಷಣದಲ್ಲೇ ಮರೆತು ಬಿಡುತ್ತಾರೆಂದು ತಿಳಿಸಿರುವರು. ಆದ್ದರಿಂದ ಸಹೋದರರೇ! ನಿಮಗೆ ನಿಮ್ಮ ದಾಂಪತ್ಯ ಜೀವನವನ್ನು ಸಂತೋಷದಿಂದ ಮುಂದುವರಿಸಬೇಕೆಂದಿದ್ದರೆ ಇಂತಹ ಕರ್ಣ ಕಠೋರವಾದ ಪದಗಳನ್ನು, ಕಹಿ ಕಷಾಯವೆಂದು ತಿಳಿದು ನಸುನಗುತ್ತಾ ನುಂಗಿಕೊಳ್ಳುವುದನ್ನು ಅಭ್ಯಾಸ ಮಾಡಿಕೊಳ್ಳಬೇಕಾಗುತ್ತದೆ. ಇದು ಅವಳ ದೌರ್ಬಲ್ಯವೆಂದು ತಿಳಿದರಾಯಿತು. ಆದರೆ ಅವಳನ್ನು ಸಂಸ್ಕರಿಸುವ ಪ್ರಯತ್ನ ಮುಂದುವರಿಯಲಿ.

ಮೂರನೆಯದಾಗಿ, ಸ್ತ್ರೀ ಬುದ್ಧಿಯಲ್ಲಿ ಪರಿಪೂರ್ಣಳಲ್ಲ. ತಿಳುವಳಿಕೆ ಮತ್ತು ವಿಚಾರವಂತಿಕೆಯ ಕೊರತೆಯಿಂದ ಅವಳಿಂದ ತಪ್ಪುಗಳು ಸಂಭವಿಸಬಹುದು. ನಿಮಗೆ ಅಲ್ಲಾಹು ಬುದ್ಧಿಯನ್ನೂ ವಿವೇಕವನ್ನೂ ಕೊಟ್ಟಿದ್ದಾನೆ. ನೀವು ನಿಮ್ಮ ಆಫೀಸಿನಲ್ಲಿ ಹೊಸದಾಗಿ ಬಂದ ನೌಕರನು ಏನಾದರೂ ತಪ್ಪು ಮಾಡಿದರೆ ಅವರಿಗೆ ಅನುಭವವಿಲ್ಲ ಅಥವಾ ಅಭ್ಯಾಸ ಇಲ್ಲವೆಂದು ಕ್ಷಮಿಸಿ ಬಿಡುವುದಿಲ್ಲವೇ? ಅದೇ ಪ್ರಕಾರ ದಾಂಪತ್ಯ ಜೀವನದಲ್ಲಿ ಕೂಡಾ ಇದೇ ನೀತಿಯನ್ನು ಪಾಲಿಸಬೇಕಾಗುತ್ತದೆ. ನೆನಪಿಟ್ಟುಕೊಳ್ಳಿ ನಿಮ್ಮ ವಿವಾಹ ಪ್ಲಾಟೋ ಅಥವಾ ಸಾಕ್ರೆಟಿಸ್ ನಂತಹ ಬುದ್ಧಿವಂತರೊಂದಿಗೆ ಆಗಿಲ್ಲ. ಬದಲಾಗಿ ಪ್ರಾಕೃತಿಕವಾಗಿ ದುರ್ಬಲಳಾಗಿರುವ ಒಬ್ಬ ಹೆಣ್ಣಿನೊಂದಿಗಾಗಿದೆ.

ನಾಲ್ಕನೆಯದಾಗಿ, ಬುದ್ಧಿಶಕ್ತಿಯಲ್ಲಿ ಪುರುಷನಿಗಿಂತ ದುರ್ಬಲೆಯಾದರೂ ಅವರು ಪುರುಷರನ್ನು ಹಿಂದಿಕ್ಕಲು ಪ್ರಯತ್ನಿಸುವುದು. ಬೀಜಗಣಿತ, ರೇಖಾಗಣಿತದ ಕಠಿಣ ಸವಾಲುಗಳಿಗೆ ಉತ್ತರಿಸುವ ವಿಷಯದಲ್ಲಲ್ಲ. ಬದಲಾಗಿ ತನ್ನ ಕೋಮಲವಾದ ಸ್ವರ, ಸುಮಧುರ ಕಂಠ, ಕಲ್ಲೆದೆಗಳನ್ನೂ ಸೀಳಿ ಬಿಡುವ ನೋಟ, ಮೋಹಕ ಸೌಂದರ್ಯಗಳಿಂದ ಬುದ್ಧಿ ಮತ್ತು ವಿವೇಕದ ಕಂಚಿನ ಪ್ರತಿಮೆಗಳನ್ನು ಕೂಡ ಕ್ಷಣಾರ್ಧದಲ್ಲಿ ನುಚ್ಚುನೂರು ಮಾಡಿಬಿಡುತ್ತಾರೆ. ಬುದ್ಧಿ ವಿವೇಕಗಳೊಂದಿಗೆ ಧರ್ಮ ನಿಷ್ಠೆ ಇರುವವರು ಮಾತ್ರ ಇವರನ್ನು ಪ್ರತಿರೋಧಿಸಿ ಗೆಲ್ಲಬಲ್ಲರು.

ಪುರುಷರು ಮತ್ತು ಸ್ತ್ರೀಯರಲ್ಲಿರುವ ಇನ್ನೊಂದು ಅಂತರ ಅವರ ಕೋಮಲತೆಯಾಗಿದೆ. ಅದು ಅವರಿಗೆ ಪ್ರಾಕೃತಿಕವಾದ ಒಂದು ಕೊಡುಗೆಯಾಗಿದೆ. ದೈಹಿಕವಾಗಿ ಅವರು ಪುರುಷರಿಗಿಂತ ದುರ್ಬಲರಾದರೂ ಕೋಮಲತೆಯು ಅವರ ದೌರ್ಬಲ್ಯವನ್ನು ಅತಿಜಯಿಸುತ್ತದೆ. ಒಮ್ಮೆ ಪ್ರವಾದಿ(ﷺ) ರವರು ಅವರನ್ನು ಗಾಜಿನ ವಸ್ತುಗಳಿಗೆ ಹೋಲಿಸಿದರು.

عَنْ أَنَسِ بْنِ مَالِكٍ رَضِيَ اللَّهُ عَنْهُ قَالَ: أَتَى النَّبِيُّ صَلَّى اللَّهُ عَلَيْهِ وَسَلَّمَ عَلَى بَعْضِ نِسَائِهِ وَمَعَهُنَّ أُمُّ سُلَيْمٍ فَقَالَ: «وَيْحَكَ يَا أَنْجَشَةُ! رُوَيْدَكَ سَوْقًا بِالْقَوَارِيرِ».

ಅನಸ್ ಬಿನ್ ಮಾಲಿಕ್(ರ) ರಿಂದ ವರದಿ. ಪ್ರವಾದಿ(ﷺ) ರವರು ಅವರ ಸ್ತ್ರೀಯರ ಬಳಿಗೆ ಬಂದರು. (ಅವರು ಒಂಟೆಯ ಮೇಲೆ ಕುಳಿತ್ತಿದ್ದರು.) ಅವರೊಂದಿಗೆ ಉಮ್ಮು ಸುಲೈಮ್(ರ) ಕೂಡ

ಇದ್ದರು. ಪ್ರವಾದಿ(ﷺ) ಚಾಲಕನೊಂದಿಗೆ ಹೇಳಿದರು. "ಓ ಅಂಜಶ! ಎಚ್ಚರಿಕೆ! ಮೃದುವಾದ ಗಾಜಿನ ಗೊಂಬೆಗಳನ್ನು ನಿಧಾನವಾಗಿ ಕರೆದುಕೊಂಡು ಹೋಗಿರಿ."

ಮೃದುವಾದ ಕೋಮಲವಾದ ವಸ್ತುಗಳನ್ನು ಮನುಷ್ಯನು ಬಹಳ ನಯವಾಗಿ ತೆಗೆದಿಡುತ್ತಾನೆ. ನಯವಾಗಿ ಉಪಯೋಗಿಸುತ್ತಾನೆ. ಉದಾಹರಣೆಗೆ, ಸ್ಟೀಲ್ ಪಾತ್ರೆಗಳನ್ನು ಎಲ್ಲೆಂದರಲ್ಲಿ ಇಡಬಹುದು. ಆದರೆ ಮೇಜಿನ ಮೇಲಿಡುವ ಗಾಜಿನ ಹೂದಾನಿಯನ್ನು ಬಹಳ ಎಚ್ಚರಿಕೆಯಿಂದ ನಯವಾಗಿ ತೆಗೆದಿಡಲಾಗುತ್ತದೆ. ಅದರೊಂದಿಗೆ ಅಜಾಗರೂಕತೆ ತೋರಿದರೆ ಅದು ಮುರಿದು ಹೋಗುತ್ತದೆ. ಅದೇ ಪ್ರಕಾರ ಸ್ತ್ರೀಯರೂ ಬಹಳ ಕೋಮಲಾಂಗಿಗಳಾಗಿರುತ್ತಾರೆ. ಇವರೊಂದಿಗೆ ನಯವಾಗಿ ನಾಜೂಕಿನಿಂದ ನಡೆದುಕೊಂಡರೆ ಮಾತ್ರ ಜೀವನ ರಥವು ಮುಂದೆ ಸಾಗಲು ಸಾಧ್ಯ. ಅನ್ಯಥಾ ಅದು ಪ್ರಾಂಭದಲ್ಲೇ ಅಥವಾ ದಾರಿಯ ನಡುವಿನಲ್ಲೇ ಕುಸಿದು ಬೀಳುವ ಅಪಾಯವಿರುತ್ತದೆ. ಪತಿಯು ಯಾವಾಗಲೂ ಪತ್ನಿಯ ಪ್ರಕೃತಿ ಸಹಜವಾದ ನ್ಯೂನತೆಗಳನ್ನು ಮರೆಯಬಾರದು. ಅವನು ಪತ್ನಿಯನ್ನು ಈ ರೀತಿಯಲ್ಲಿ ಅರ್ಥಮಾಡಿಕೊಂಡಾಗ ಮಾತ್ರ ಅವನಿಗೆ ಅವಳ ಲೋಪದೋಷಗಳನ್ನು ಅವಗಣಿಸಿ ಅವಳಲ್ಲಿರುವ ಒಳಿತನ್ನು ಉಪಯೋಗಿಸಿಕೊಂಡು ಜೀವನವನ್ನು ಶಾಂತಿ ಮತ್ತು ಸಂತೃಪ್ತಿಯೊಂದಿಗೆ ಸಾಗಿಸಲು ಸಾಧ್ಯವಾಗುತ್ತದೆ.

ಅವನು ಅವಳಿಂದ ಪರಿಪೂರ್ಣತೆಯ ನಿರೀಕ್ಷೆ ಇಟ್ಟುಕೊಂಡರೆ ಅವಳ ಸ್ತ್ರೀ ಸಹಜವಾದ ಗುಣ ಸ್ವಭಾವಗಳು ಪ್ರಕಟವಾದಾಗಲೆ-ಲ್ಲಾ ತಲೆಯ ಮೇಲೆ ಕೈ ಹೊತ್ತು ಆಕಾಶವೇ ಕಳಚಿಬಿದ್ದಂತೆ ಚಿಂತೆ ಮತ್ತು ವ್ಯಸನದಿಂದ ದಿನ ಕಳೆಯಬೇಕಾಗುತ್ತದೆ. ಸ್ತ್ರೀ ಕೇವಲ ಪತ್ನಿ ಮಾತ್ರವಲ್ಲ, ಅವಳು ತಾಯಿ, ತಂಗಿ, ಪುತ್ರಿಯೂ ಆಗಿರುತ್ತಾಳೆ. ಅವಳಲ್ಲಿ ನಾವು ಕೇವಲ ದೌರ್ಬಲ್ಯತೆಗಳನ್ನು ಮಾತ್ರ ಕಾಣುವುದಲ್ಲ. ಬದಲಾಗಿ ವಾತ್ಸಲ್ಯದ ನಿಧಿಯೂ ತ್ಯಾಗ ಮತ್ತು ಕರುಣೆಯ ಪ್ರತಿರೂ-ಪವನ್ನೂ ನಾವು ಅವಳಲ್ಲಿ ದರ್ಶಿಸುತ್ತೇವೆ. ಕೆಲವೊಂದು ಕ್ಷುಲ್ಲಕ ವಿಷಯಗಳಿಗಾಗಿ ಅವಳು ಮುನಿಸಿಕೊಂಡು ಕೃತಘ್ನತೆಯನ್ನು ಪ್ರಕ-ಟಿಸುತ್ತಾಳಾದರೂ ಸಮಯ ಬಂದಾಗ ತನ್ನ ಪತಿಗಾಗಿ ತ್ಯಾಗ ಮತ್ತು ನಿಷ್ಠೆಯ ಪ್ರತಿಮೆಯಾಗಿಬಿಡುತ್ತಾಳೆ. ■

---

*10 ನೇ ಪುಟದಿಂದ*

## ಬೇಟೆಯೇ ಬೇಟೆಗಾರನನ್ನು ಬೇಟೆಯಾಡಿದಾಗ...

ಇಸ್ಲಾಮ್ ಕೇವಲ ಪರಪುರುಷ ಸ್ತ್ರೀಯರು ದೈಹಿಕ ಸಂಪರ್ಕದಲ್ಲಿ ಏರ್ಪಡುವುದನ್ನು ಮಾತ್ರವೇ ವ್ಯಭಿಚಾರವೆಂದು ಪರಿಗಣಿಸುವುದಿಲ್ಲ. ಬದಲಾಗಿ ಅನ್ಯ ಸ್ತ್ರೀಯರನ್ನು ಅನಗತ್ಯವಾಗಿ ನೋಡುವುದು, ಅಶ್ಲೀಲ ಚಿತ್ರಗಳನ್ನು ಆಸ್ವದಿಸುವುದು, ಪರಸ್ತ್ರೀಯೊಂದಿಗೆ ಅನಾವಶ್ಯಕವಾಗಿ ಮಾತನಾಡುವುದು ಕೂಡ ವ್ಯಭಿಚಾರದ ಯಾದಿಯಲ್ಲಿ ಸೇರುತ್ತದೆ. ಇವೆಲ್ಲವೂ ದೈಹಿಕ ಸಂಬಂಧ ಬೆಳೆಸಲು ಪ್ರೇರಕವಾಗುವ ಅಂಶಗ-ಳಾಗಿರುವುದರಿಂದಲೇ ಇಸ್ಲಾಮಿನ ದೃಷ್ಟಿಯಲ್ಲಿ ಪಾಪವಾಗಿದೆ.

ದೃಷ್ಟಿಗಳನ್ನು ನಿಯಂತ್ರಿಸುವ ಮೂಲಕ ಅನ್ಯ ಸ್ತ್ರೀಯರೆಡೆಗೆ ಅನಗತ್ಯವಾಗಿ ನೋಡದಿರುವುದು ಲೈಂಗಿಕ ಪರಿಶುದ್ಧತೆ ಕಾಯ್ದು-ಕೊಳ್ಳುವ ಭಾಗವಾಗಿದೆ.

قُل لِّلۡمُؤۡمِنِينَ يَغُضُّواْ مِنۡ أَبۡصَٰرِهِمۡ
وَيَحۡفَظُواْ فُرُوجَهُمۡۚ ذَٰلِكَ أَزۡكَىٰ لَهُمۡۗ إِنَّ
ٱللَّهَ خَبِيرُۢ بِمَا يَصۡنَعُونَ ٣٠

"(ಪ್ರವಾದಿಯವರೇ) ಸತ್ಯವಿಶ್ವಾಸಿಗಳೊಡನೆ ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿಕ್ಕೂ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿಕ್ಕೂ ಹೇಳಿರಿ. ಇದು ಅವರ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮವಾಗಿದೆ. ಅಲ್ಲಾಹನು ಅವರು ಮಾಡುವುದೆಲ್ಲವನ್ನೂ ಅರಿಯುವವನಾಗಿ-ದ್ದಾನೆ." (24:30)

ಮುಸ್ಲಿಮ್ ಮಹಿಳೆಯರ ಸ್ವಾತಂತ್ರ್ಯ ಹರಣಕ್ಕಾಗಿ ಇಸ್ಲಾಮ್ ಆಕೆಯ ಮೇಲೆ ಈ ನಿಯಮಗಳನ್ನು ಹೇರಿದ್ದಲ್ಲ. ಅವರನ್ನು ಕಿರುಕುಳ, ದಬ್ಬಾಳಿಕೆ, ಹಿಂಸೆಯಿಂದ ರಕ್ಷಿಸಿ ಅಪಮಾನದಿಂದ ಕಾಪಾಡುವುದೇ ಇದರ ಉದ್ದೇಶವಾಗಿದೆ. ಇಸ್ಲಾಮ್ ಅನೈತಿಕತೆ-ಯೆಡೆಗೆ ಸೆಳೆಯುವಂತಹ ಎಲ್ಲಾ ಮಾರ್ಗಗಳನ್ನು ಮುಚ್ಚಿದೆ.

ಬೇಟೆಯಾಗದಿರಲು, ಬೇಟೆಗಾರನಾಗದಿರಲು ಮತ್ತು ಬೇಟೆಯೇ ತಿರುಗಿ ನಿಂತು ಬೇಟೆಗಾರನನ್ನು ಬೇಟೆಯಾಡದಿರುವ ಸನ್ನಿವೇಶ ನಿರ್ಮಾಣವಾಗದಿರಲು ಅದಕ್ಕಿರುವ ಮಾರ್ಗ ಸ್ವತಃ ಉತ್ತಮವಾ-ಗುವುದು. ಬೇಟೆಗಾರನನ್ನು ಆಕರ್ಷಿಸುವ, ವಶೀಕರಿಸುವ ಯಾವ ಕಾರ್ಯವೂ ಬೇಟೆಯಿಂದ ನಡೆಯಬಾರದು. ಎಷ್ಟು ಆಮಿಷ, ಪ್ರಚೋದನೆಗೊಳಗಾದರೂ ಅನರ್ಹವಾದುದನ್ನು ಪಡೆಯಲು ಪ್ರಯತ್ನಿಸಬಾರದು. ಗಂಡಾಗಿರಲಿ ಹೆಣ್ಣಾಗಿರಲಿ ಪರಿಶುದ್ಧ ಜೀವನ ನಡೆಸಿದರೆ ಯಾರೂ ಅವಮಾನಿತರಾಗುವ ಪ್ರಮೇಯವೇ ಬಂದೊ-ದಗುವುದಿಲ್ಲ. ■

# ವ್ಯಾಪಾರದಲ್ಲಿ ಲಾಭದ ಪರಿಧಿ

ಪೀಸ್ ರೇಡಿಯೋದಲ್ಲಿ ಪ್ರಸಾರವಾಗುವ 'ಅಲ್ಇಜಾಬ' ಎಂಬ ಕಾರ್ಯಕ್ರಮಕ್ಕೆ ಲಭಿಸಿದ ಪ್ರಮುಖ ಪ್ರಶ್ನೆಗಳು ಮತ್ತು ಅದಕ್ಕೆ ವಿದ್ವಾಂಸರು ನೀಡಿದ ಉತ್ತರಗಳು.

**ಪ್ರಶ್ನೆ:** ವ್ಯಾಪಾರದಲ್ಲಿ ಶೇಕಡಾ ಎಷ್ಟು ಪ್ರಮಾಣದ ತನಕ ಲಾಭ ಪಡೆಯಬಹುದು?

**ಉತ್ತರ:** ಮೂಲತಃ ವ್ಯಾಪಾರವು ಸಮ್ಮತಾರ್ಹ (ಹಲಾಲ್) ಆಗಿದೆ. ಅದನ್ನು ಹಲಾಲ್ ಆದ ರೀತಿಯಲ್ಲಿ ವಿರೋಧಿಸಲ್ಪಡದ ರೀತಿಯಲ್ಲಿ ಮಾಡುವುದು ಪ್ರಮುಖವಾಗಿದೆ. ವ್ಯಾಪಾರದಲ್ಲಿ ಶೇಕಡಾ ಇಂತಿಷ್ಟೇ ಲಾಭ ಪಡೆಯಬೇಕು ಎಂಬ ಮಾನದಂಡ ಇಸ್ಲಾಮಿನಲ್ಲಿಲ್ಲ. ವರ್ತಕನು ಮೂಲಭೂತವಾಗಿ ತಿಳಿದಿರಬೇಕಾದಂತಹ ಕೆಲವು ಕಾರ್ಯಗಳಿವೆ. ಜನರನ್ನು ಶೋಷಿಸುವ ವಿಧದಲ್ಲಿ ವ್ಯಾಪಾರ ಮಾಡದಿರುವುದು ಅವುಗಳಲ್ಲೊಂದಾಗಿದೆ.

'ಇಹ್ತಿಕಾರ್' ಅದರಲ್ಲಿ ಒಳಪಡುತ್ತದೆ. ಪ್ರವಾದಿ(ﷺ) ಹೇಳುತ್ತಾರೆ. "ಇಹ್ತಿಕಾರ್ ಮಾಡುವವನು ಪ್ರಮಾದವೆಸಗುವವನಾಗಿದ್ದಾನೆ." ಇಹ್ತಿಕಾರ್ ಎಂದರೆ ಕಾಳಸಂತೆ ಎಂದರ್ಥ. ಜನರಿಗೆ ಅತ್ಯಾವಶ್ಯಕವಾದ ವಸ್ತುಗಳು ತನ್ನ ಬಳಿಯಲ್ಲಿ ದಾಸ್ತಾನಿದ್ದರೂ ಅದನ್ನು ಮಾರಾಟ ಮಾಡದೆ ಅಡಗಿಸಿಡುವುದು ಇಹ್ತಿಕಾರ್ ಆಗಿದೆ.

ತನ್ನ ವಸ್ತುಗಳನ್ನು ತನಗೆ ಯಾವಾಗ ಮತ್ತು ಹೇಗೆ ಬೇಕಾದರೂ ಮಾರಾಟ ಮಾಡುವ ಅಧಿಕಾರ ಇಸ್ಲಾಮ್ ಕೊಟ್ಟಿದೆ ಎಂದು ಕೆಲವರು ಸಮರ್ಥಿಸಿಕೊಳ್ಳುತ್ತಾರೆ. ಜನರಿಗೆ ಅತ್ಯಾವಶ್ಯಕವಾಗಿ ಲಭಿಸಬೇಕಾದ ವಸ್ತುಗಳನ್ನು ಬಚ್ಚಿಡುವುದು ಅವರನ್ನು ಕಷ್ಟಕ್ಕೆ ಗುರಿಪಡಿಸುವ ಕ್ರಮವಾಗಿದೆ. ವ್ಯಾಪಾರಸ್ಥರು ಹೀಗೆ ಮಾಡುವುದರ ಮೂಲಕ ವಸ್ತುಗಳ ಕೃತಕ ಅಭಾವವನ್ನು ಸೃಷ್ಟಿಸಿ ಅದರ ಬೆಲೆ ಏರುವಂತೆ ಮಾಡುವ ಉದ್ದೇಶವನ್ನು ಹೊಂದಿರುತ್ತಾರೆ. ಆದುದರಿಂದಲೇ ಜನರನ್ನು ಕಷ್ಟಕ್ಕೆ ಗುರಿಪಡಿಸುವ ವಿಧದಲ್ಲಿರುವ ಕಾಳಸಂತೆಯನ್ನು ಇಸ್ಲಾಮ್ ವಿರೋಧಿಸಿದೆ. ಇಸ್ಲಾಮಿಕ್ ಆಡಳಿತವಿರುವ ರಾಷ್ಟ್ರದಲ್ಲಾದರೆ ಅಲ್ಲಿಯ ಆಡಳಿತಾಧಿಕಾರಿಗಳು ಕಾಳಸಂತೆಕೋರನ ವ್ಯಾಪಾರಿ ಸರಕನ್ನು ಇಂತಿಷ್ಟೇ ದರಕ್ಕೆ ಮಾರಾಟ ಮಾಡಬೇಕು ಎಂಬ ತೀರ್ಮಾನವನ್ನು ತೆಗೆದುಕೊಳ್ಳಬಹುದು.

ಸಂಕ್ಷಿಪ್ತದಲ್ಲಿ ಜನರಿಗೆ ತೊಂದರೆಯಾಗುವ ರೀತಿಯಲ್ಲಿರುವ ವ್ಯಾಪಾರ ಅದು ಕಾಳಸಂತೆಯಾದರೂ ಇನ್ನಿತರ ರೂಪದಲ್ಲಾದರೂ ಸಮ್ಮತಾರ್ಹವಲ್ಲ. ಹಾಗೆ ನೋಡಿದರೆ ಜನರಿಗೆ ಹೊರಲು ಅಸಾಧ್ಯವಾದ ರೂಪದಲ್ಲಿ ಲಾಭ ಪಡೆಯುವುದನ್ನು ಖಂಡಿತವಾಗಿಯೂ ತೊರೆಯಬೇಕಾಗಿದೆ.ಕೆಲವು ಸಂದರ್ಭಗಳಲ್ಲಿ ಗ್ರಾಹಕರು ಎಷ್ಟು ದರವನ್ನು ತೆತ್ತಾದರೂ ವಸ್ತುಗಳನ್ನು ಖರೀದಿಸುತ್ತಾರೆ.

ಆಸ್ಪತ್ರೆಯಂತಹ ಸೇವಾಕೇಂದ್ರಗಳ ಅವಸ್ಥೆಯನ್ನೊಮ್ಮೆ ನೋಡಿರಿ. ಒಬ್ಬರ ಪ್ರಾಣ ರಕ್ಷಿಸುವುದು ಆ ವ್ಯಕ್ತಿಯ ಸಂಬಂಧಿಕರ ಬಹುಮುಖ್ಯ ಕಾಳಜಿಯಾಗಿರುತ್ತದೆ. ಆದುದರಿಂದ ಅವರು ವೈದ್ಯರು ಸೂಚಿಸುವ ಎಲ್ಲಾ ತಪಾಸಣೆಗಳನ್ನು ನಡೆಸುತ್ತಾರೆ. ಬರೆಯುವ ಔಷಧಿಗಳೆಲ್ಲವನ್ನು ಖರೀದಿಸುತ್ತಾರೆ. ಸಾಲ ಪಡೆದಾದರೂ ಆಸ್ಪತ್ರೆಯ ಬಿಲ್ ಸಂದಾಯ ಮಾಡುತ್ತಾರೆ.

ಪ್ರಯಾಣದ ಮಧ್ಯೆ ವಾಹನ ಕೆಟ್ಟುಹೋದರೆ ರಿಪೇರಿ ಮಾಡಿ ಪ್ರಯಾಣ ಮುಂದುವರಿಸುವುದು ಅನಿವಾರ್ಯವಷ್ಟೆ. ಆ ಸಂದರ್ಭ

ಅದರ ಸ್ಪೇರ್ ಪಾರ್ಟ್ಸ್ (ಬಿಡಿಭಾಗ) ಖರೀದಿಸಲು ಎಷ್ಟು ಹಣ ಕೊಡಲೂ ಸಿದ್ಧರಾಗಬೇಕಾಗುತ್ತದೆ. ಆದರೆ ಇಂತಹ ಅಸಹಾಯಕ ಪರಿಸ್ಥಿತಿಯನ್ನು ಶೋಷಿಸಿ ಅಪಾರ ಲಾಭ ಪಡೆಯುವುದು ಜನರಿಗೆ ತೊಂದರೆ ಕೊಡುವ ನಡವಳಿಕೆಯಾಗಿದೆ. ಕಡಿಮೆ ಲಾಭ ಪಡೆಯುವಾಗ ಹೆಚ್ಚು ವ್ಯಾಪಾರವಾಗುತ್ತದೆ. ಆ ಅಂಗಡಿಗೆ ಹೆಚ್ಚಿನ ಗ್ರಾಹಕರು ಬರುತ್ತಾರೆ. ಹೀಗಿರುವಾಗ ಕಡಿಮೆ ಲಾಭ ಪಡೆಯುವುದು ಹೆಚ್ಚಿನ ಲಾಭಕ್ಕೆ ದಾರಿಯಾಗಿದೆಯಂದು ನಾವು ತಿಳಿದುಕೊಳ್ಳಬೇಕು.

**ಪ್ರಶ್ನೆ:** ಆರ್ತವ ಸಮಯದಲ್ಲಿ ಉಗುರು, ಕೂದಲು ತೆಗೆಯು-ವುದರಲ್ಲಿ ತಪ್ಪಿದೆಯೇ?

**ಉತ್ತರ:** ಇದು ಜನರಲ್ಲಿ ಸಾಮಾನ್ಯವಾಗಿ ಕಂಡು ಬರುತ್ತಿರುವ ಒಂದು ಮೂಢನಂಬಿಕೆಯಾಗಿದೆ. ಆರ್ತವ ಅಥವಾ ಜನಾಬತ್ (ದೊಡ್ಡ ಅಶುದ್ಧಿ) ಇರುವ ಸಮಯದಲ್ಲಿ ಉಗುರು, ಕೂದಲು ತೆಗೆದರೆ ಅದು ಶುದ್ಧಿಯಿಲ್ಲದ ಅವಸ್ಥೆಯಲ್ಲಿ ನಿವಾರಣೆಯಾಗುತ್ತದೆ. ಆದುದರಿಂದ ಈ ದೈಹಿಕ ತ್ಯಾಜ್ಯಗಳು ಪರಲೋಕದಲ್ಲಿ ದೇಹಕ್ಕೆ ನಜಸ್ (ಮಲಿನ) ಆದ ನೆಲೆಯಲ್ಲಿ ಬಂದು ಸೇರಿಕೊಳ್ಳುತ್ತದೆ ಎಂಬ ಅಂಧವಿಶ್ವಾಸ ಕೆಲವೆಡೆ ಪ್ರಚಾರದಲ್ಲಿದೆ.

ಆದರೆ ಇಸ್ಲಾಮಿಕ್ ಪ್ರಮಾಣಗಳು ಹೀಗೆ ಆರ್ತವ ಅಥವಾ ಜನಾಬತ್ ಸ್ಥಿತಿಯಲ್ಲಿ ಉಗುರು, ಕೂದಲು ತೆಗೆಯುವುದು ನಿಷಿದ್ಧವೆಂದು ಕಲಿಸಿಕೊಡುವುದಿಲ್ಲ. ಒಂದು ಕಾರ್ಯ ಹರಾಮ್ ಅಥವಾ ಹಲಾಲ್ ಎಂದು ತೀರ್ಪು ನೀಡಬೇಕಾದರೆ ಅದಕ್ಕೆ ಪ್ರಮಾಣಗಳ-ಲ್ಲಿ ಪುರಾವೆ ಇರಬೇಕು.

ಮೂಲಭೂತವಾಗಿ ಓರ್ವ ಹಾಕಿಮ್ ಅಥವಾ ಧಾರ್ಮಿಕವಾದ ಒಂದು ನಿಯಮವನ್ನು ರಚಿಸುವವನು ಅಲ್ಲಾಹನಾಗಿದ್ದಾನೆ. ಆದುದರಿಂದ ಒಂದು ಕಾರ್ಯ ಹರಾಮ್ ಎಂದು ಹೇಳಬೇಕಾದರೆ ಅಲ್ಲಾಹನಿಂದ ಲಭಿಸಿದ ದಿವ್ಯಸಂದೇಶ (ವಹ್ಯ್) ದ ಆಧಾರದಲ್ಲಿ ಪ್ರವಾದಿ(ﷺ)ಯವರು ಅದನ್ನು ನಮಗೆ ಕಲಿಸಿಕೊಟ್ಟಿರಬೇಕು. ಪ್ರವಾದಿ(ﷺ) ಯವರು ಹಾಗೆ ಪ್ರತ್ಯೇಕವಾಗಿ ಹೇಳಿಲ್ಲ. ಮಾತ್ರವ-ಲ್ಲದೆ, ಹದೀಸನ್ನು ಪರಿಶೋಧಿಸಿದರೆ ಹಾಗೆ ಮಾಡುವುದರಲ್ಲಿ ತಪ್ಪಿಲ್ಲ ಎಂದು ತಿಳಿದುಬರುತ್ತದೆ.

ಸ್ತ್ರೀಯರು ಆರ್ತವ ಸಮಯದಲ್ಲಿ ಉಗುರು ಮತ್ತು ಕೂದಲನ್ನು ತೆಗೆಯುವಂತೆ ಅವರು ತಲೆ ಬಾಚುವಾಗಲೂ ಕೂದಲು ನಷ್ಟವಾಗುತ್ತದೆ. ಸಹಜವಾಗಿ ನಡೆಯುವ ಈ ಕಾರ್ಯದ ಕುರಿತೂ ಚಿಂತಿಸಬೇಕಷ್ಟೆ.

ಆಯಿಶಾ(ರ) ರವರು ಪ್ರವಾದಿ(ﷺ) ರವರ ಜೊತೆಯಲ್ಲಿ ಹಜ್ಜತುಲ್ ವಿದಾಅ್‌ಗೆ ತೆರಳಿದಾಗ ಜನರೆಲ್ಲರೂ ಉಮ್ರ ಮತ್ತು ಹಜ್ಜ್‌ಗಾಗಿ ಇಹ್ರಾಮ್‌ನಲ್ಲಿ ಪ್ರವೇಶಿಸಿದ್ದರು. ಆ ಸಮಯ ಆಯಿಶಾ(ರ) ರಿಗೆ ಆರ್ತವವಿದ್ದುದರಿಂದ ಉಮ್ರ ನಿರ್ವಹಿಸಲು ಸಾಧ್ಯವಿರಲಿಲ್ಲ. ಇದರಿಂದ ಬಹಳ ದುಃಖಿತರಾದ ಆಯಿಶಾ(ರ) ರನ್ನು ಪ್ರವಾದಿ (ﷺ) ಯವರು ಸಮಾಧಾನಪಡಿಸುತ್ತಾ, ಉಮ್ರವನ್ನು ತೊರೆದು ಹಜ್ಜ್‌ಗಾಗಿ ಇಹ್ರಾಮ್‌ನಲ್ಲಿ ಪ್ರವೇಶಿಸುವಂತೆ ಹೇಳಿದರು. ಜೊತೆಗೆ ಅವರು ಕೂದಲು ಬಾಚಿ, ಅದರ ಕಟ್ಟನ್ನು ಬಿಡಿಸಿಕೊಳ್ಳಲು ಸೂಚಿಸಿದರು. ಕೂದಲು ಬಾಚುವಾಗ ಸ್ವಾಭಾವಿಕವಾಗಿಯೇ ಕೂದಲು ಉದುರಿ ಬೀಳುತ್ತದೆ. ಆದುದರಿಂದ ಆರ್ತವ ಸಮಯದಲ್ಲಿ ತಿಳಿದೋ ತಿಳಿಯದೆಯೋ ಕೂದಲು ನಷ್ಟವಾಗುವುದು ಅಥವಾ ನಷ್ಟ ಮಾಡಿಕೊಳ್ಳುವುದರಿಂದ ಯಾವುದೇ ತಪ್ಪಿಲ್ಲವೆಂದು ಈ ಹದೀಸಿನ ಬೆಳಕಿನಲ್ಲಿ ಶೈಖುಲ್ ಇಸ್ಲಾಮ್ ಇಬ್ನ್ ತೈಮಿಯ್ಯ(ರ) ಅಭಿಪ್ರಾಯಪಟ್ಟಿದ್ದಾರೆ.

**ಪ್ರಶ್ನೆ:** ಇಂತಹ ಸಂದರ್ಭಗಳಲ್ಲಿ ನೀಗಿಸಲ್ಪಡುವ ಉಗುರು ಮತ್ತು ಕೂದಲನ್ನು ಮಣ್ಣಿನಡಿಯಲ್ಲಿ ಹೂಳಬೇಕೆಂಬ ಕಲ್ಪನೆ ಕೆಲವೆಡೆಗಳ-ಲ್ಲಿ ಚಾಲ್ತಿಯಲ್ಲಿದೆ. ಈ ವಿಷಯದ ಕುರಿತು ವಿಧಿ ಏನು ಹೇಳುತ್ತದೆ?

**ಉತ್ತರ:** ಪ್ರಾಯಶಃ ಅದು ಅಂಧವಿಶ್ವಾಸವಾಗಿರಬೇಕೆಂದಿಲ್ಲ. ಆರ್ತವ ಸಮಯದಲ್ಲಿ ಮಾತ್ರವಲ್ಲ, ಎಲ್ಲಾ ಸಮಯದಲ್ಲಿ ತೆಗೆಯಲಾಗುವ ಉಗುರು ಮತ್ತು ಕೂದಲನ್ನು ಜನರಿಗೆ ಕಾಣಿಸುವ ರೀತಿಯಲ್ಲಿ ಮನೆ, ಜಗಲಿಯಲ್ಲಿ ಬಿಸಾಡುವುದು ಜನರಿಗೆ ಜಿಗುಪ್ಸೆ ಹುಟ್ಟಿಸುವ ಕಾರ್ಯವಾಗಿದೆ. ಪ್ರವಾದಿ(ﷺ) ಯವರು ಶುಚಿತ್ವವು ಈಮಾನಿನ ಲಕ್ಷಣವಾಗಿಯೆಂದು ಹೇಳಿರುವರು. ಉಗುರು, ಕೂದಲಿನಂತಹ ತ್ಯಾಜ್ಯಗಳು ಮನೆಯ ಸಮೀಪ ಬಿದ್ದಿದ್ದರೆ ಅದು ಇತರರಿಗೆ ನಮ್ಮ ಕುರಿತು ಮತ್ತು ನಮ್ಮ ಧರ್ಮದ ಕುರಿತು ಕೆಟ್ಟ ಅಭಿಪ್ರಾಯ ರೂಪುಗೊಳ್ಳಲು ಕಾರಣವಾಗುತ್ತದೆ ಎಂದು ಭಾವಿಸಿ ಅದನ್ನು ಹೂಳುವುದು ಉತ್ತಮವೇ ಆಗಿದೆ. ಈ ವಿಷಯದಲ್ಲಿ ಪ್ರತ್ಯೇಕವಾದ ಯಾವುದೇ ನಿರ್ದೇಶನಗಳಿಲ್ಲದಿರುವುದರಿಂದ ಯಾರಾದರೂ ಅದನ್ನು ಹೂಳಿದರೆ ಆಕ್ಷೇಪಿಸುವಂತಿಲ್ಲ. ಹೀಗೆ ಯೋಚಿಸುವವರು ಆರ್ತವ ಜನಾಬತ್ ಸಮಯದಲ್ಲಿ ಮಾತ್ರವಲ್ಲದೆ, ಅದಿಲ್ಲದ ಸಮಯದಲ್ಲಿಯೂ ಹಾಗೆಯೇ ಮಾಡಬೇಕು. ಆದರೆ, ಅದು ಧರ್ಮದ ಆದೇಶವಾಗಿದೆ ಎಂಬ ನೆಲೆಯಲ್ಲಿ ಮಾಡಿದರೆ, ಆರ್ತವ ಸಮಯದಲ್ಲಿ ನೀಗಿಸುವ ಕೂದಲು ಉಗುರುಗಳನ್ನೆಲ್ಲ ಹೂಳದಿದ್ದರೆ ಅದರಿಂದ ಮಾರಕ ಕಾಯಿಲೆ ಅಥವಾ ಇನ್ನಿತರ ಸಮಸ್ಯೆಗಳು ಉಂಟಾಗಬಹುದು ಎಂಬ ಆಧಾರದಲ್ಲಿ ಹಾಗೆ ಮಾಡುವುದು ಸರಿಯಲ್ಲ. ■




# ರಬೀಅ್ ಬಿಂತ್ ಮಊರ್ಝ್(ರ)

ರಬೀಅ್ ಬಿಂತ್ ಮಊರ್ಝ್(ರ) ಅತ್ಯಂತ ವಿದ್ಯೆ ಮತ್ತು ಬುದ್ಧಿಯಿರುವ ಮಹಿಳೆಯಾಗಿದ್ದರು. ಅವರು ಪ್ರವಾದಿ (ಸ) ರವರಿಂದ 21 ಹದೀಸ್ ವರದಿ ಮಾಡಿರುತ್ತಾರೆ. ಅಬ್ದುಲ್ಲ ಬಿನ್ ಅಬ್ಬಾಸ್(ರ) ಮತ್ತು ಇಮಾಮ್ ಝೈನುಲ್ ಆಬಿದೀನ್‌ರಂತವರು ಕೆಲವು ಸೂಕ್ಷ್ಮವಾದ ಧಾರ್ಮಿಕ ವಿಷಯಗಳ ವಿಷದೀಕರಣಕ್ಕಾಗಿ ಇವರನ್ನು ಸಂಪರ್ಕಿಸುತ್ತಿದ್ದರು. ಇವರಿಂದ ಹದೀಸ್ ಉಲ್ಲೇಖಿಸಿದವರಲ್ಲಿ ಸುಲೈಮಾನ್ ಬಿನ್ ಯಸಾರ್, ಅಬೂ ಸಲ್ಮಾ ಬಿನ್ ಅಬ್ದುರ್ರಹ್ಮಾನ್, ಆಯಿಶಾ ಬಿಂತ್ ಅನಸ್ ಬಿನ್ ಮಾಲಿಕ್, ಉಬಾದ ಬಿನ್ ವಲೀದ್ ಮತ್ತು ಅಬ್ದುಲ್ಲ ಬಿನ್ ಮುಹಮ್ಮದ್ ಬಿನ್ ಅಕೀಲ್ ಮುಂತಾದ ದಿಗ್ಗಜರು ಸೇರಿದ್ದಾರೆ.

"ಅಲ್ಲಾಹನ ಸಂದೇಶವಾಹಕರನ್ನು(ಸ) ಪ್ರೀತಿಸುವುದೇ ನಿಜವಾದ ಈಮಾನ್ ಆಗಿದೆ."

ಯಾವ ಹೃದಯದಲ್ಲಿ ಪ್ರವಾದಿ(ಸ) ರವರ ಕುರಿತು ಪ್ರೀತಿ ಇಲ್ಲವೋ ಆ ಹೃದಯದಲ್ಲಿ ಈಮಾನ್ ಇಲ್ಲ ಎಂದೇ ಅರ್ಥ. ನೀವು ಈಮಾನಿನ ಸವಿ ಆಸ್ವದಿಸಬೇಕೆಂದುಕೊಳ್ಳುವುದಾದರೆ ಲೋಕ ನಾಯಕ ಮುಹಮ್ಮದ್(ಸ) ರವರ ಕುರಿತಾದ ಪ್ರೀತಿ ಮತ್ತು ನಿಷ್ಠೆಯನ್ನು ಹೃದಯದ ಆಳದಲ್ಲಿ ಹುದುಗಿಸಿಕೊಳ್ಳಲೇಬೇಕು.

ಅಲ್ಲಾಹನ ಇಬಾದತ್‌ಗೆ ಪ್ರವಾದಿ(ಸ) ರವರ ಅನುಸರಣೆ, ಪ್ರೀತಿ ಮತ್ತು ಪ್ರವಾದಿ(ಸ) ರವರ ವಿರೋಧಿಗಳೊಂದಿಗೆ ದ್ವೇಷ ಪ್ರಕಟಿಸುವುದೊಂದೇ ದಾರಿಯಲ್ಲದೆ ಇತರೆಲ್ಲಾ ದ್ವಾರಗಳೂ ಮುಚ್ಚಲ್ಪಡುತ್ತದೆ. ಯಶಸ್ಸು ಬಯಸುವವರು ಪ್ರವಾದಿ(ಸ) ರವರ ಕಡೆಗೆ ಮುಖಮಾಡಬೇಕು. ಇದು ಅನಿವಾರ್ಯವಾದ ಬೇಡಿಕೆಯಾಗಿದೆ.

ಈ ಮಾತುಗಳನ್ನು ರಬೀಅ್ ಬಿಂತ್ ಮಊರ್ಝ್(ರ) ರವರು ಮದೀನದ ಮಹಿಳೆಯರ ಒಂದು ಸಭೆಯನ್ನುದ್ದೇಶಿಸಿ ಹೇಳಿದ್ದಾಗಿದೆ.

ರಬೀಅ್(ರ) ರವರು ಖಝ್ರಜ್ ಗೋತ್ರದ ಬನೂ ನಜ್ಜಾರ್ ವಂಶದ ಸ್ತ್ರೀ ಆಗಿದ್ದಾರೆ. ಅವರ ತಂದೆಯ ಹೆಸರು ಮಊರ್ಝ್ ತಾಯಿ ಉಮ್ಮು ಯಝೀದ್ ರವರಾಗಿದ್ದಾರೆ. ಅವರು ಹಿಜಿರಾದ ನಂತರ ಇಸ್ಲಾಮಿನಲ್ಲಿ ಪ್ರವೇಶಿಸಿದರು ಮತ್ತು ಹುದೈಬಿಯಾ ಸಂಧಿಯ ಸಂದರ್ಭದಲ್ಲಿ ಹಾಜರಿದ್ದರು. ಇವರ ವಿವಾಹ ಅಯಾಸ್ ಬಿನ್ ಕಬೀರ್ ಲೈಸಿಯವರೊಂದಿಗೆ ಆಯಿತು.

ಮದುವೆಯ ಎರಡನೇ ದಿನ ಪ್ರವಾದಿ(ಸ) ಅವರ ಮನೆಗೆ ಭೇಟಿ ನೀಡಿದರು ಮತ್ತು ಹಾಸಿಗೆಯ ಮೇಲೆ ಕುಳಿತುಕೊಂಡರು. ಸಂತೋಷದ ಸಂದರ್ಭವಾಗಿತ್ತು. ಬಾಲಕಿಯರು ದಫ್ ಬಾರಿಸುತ್ತಾ ಬದ್ರ್‌ನಲ್ಲಿ ರಕ್ತಸಾಕ್ಷಿಯಾದ ಯೋಧರ ಯಶೋಗಾಥೆಯನ್ನು ಹಾಡುತ್ತಿದ್ದರು. ಪ್ರವಾದಿ(ಸ) ರವರ ಆಗಮನದಿಂದ ಪುಳಕಿತರಾದ ಮಕ್ಕಳು ಅವರನ್ನು ಹಾಡಿ ಹೊಗಳುತ್ತಾ ಹೀಗೆ ಹಾಡತೊಡಗಿದರು.

وَفِينَا نَبِيٌّ يَعْلَمُ مَا فِي غَدٍ.

"ನಮ್ಮಲ್ಲಿ ನಾಳಿನ ವಿಷಯಗಳನ್ನು ಬಲ್ಲ ಪ್ರವಾದಿಗಳು

ಉಪಸ್ಥಿತರಿದ್ದಾರೆ.”

ತಕ್ಷಣ ಅಲ್ಲಾಹನ ಸಂದೇಶವಾಹಕರು(ﷺ) ಅವರನ್ನು ತಡೆಯುತ್ತಾ “ನೀವು ಮೊದಲು ಹಾಡುತ್ತಿದ್ದುದನ್ನೇ ಹಾಡಿರಿ” ಎಂದು ಹೇಳಿದರು.

ರಬೀಅ್ ಬಿಂತ್ ಮಊರ್ಝ್(ؓ) ಒಂದು ಸಾಹಸೀ ಮನೋಭಾವದ ವೀರ ವನಿತೆಯಾಗಿದ್ದರು. ಹಲವು ಯುದ್ಧಗಳಲ್ಲಿ ಪಾಲ್ಗೊಂಡವರು. ಪ್ರವಾದಿ(ﷺ) ರವರ ಆಪ್ತಸಂಗಾತಿಗಳಲ್ಲಿ ಪರಿಗಣಿಸಲ್ಪಡುವ ಸೌಭಾಗ್ಯ ಪಡೆದವರು. ಯುದ್ಧಗಳಲ್ಲಿ ಬಹಳ ಚುರುಕುತನವನ್ನು ದಿಟ್ಟತನವನ್ನು ಪ್ರದರ್ಶಿಸುತ್ತಿದ್ದರು.

ಚರಿತ್ರೆಯ ಗ್ರಂಥಗಳಲ್ಲಿ ಯುದ್ಧಕಣದಲ್ಲಿ ಎಲ್ಲಾ ಕಡೆ ದೃಷ್ಟಿಯಿರಿಸುತ್ತಿದ್ದರೆಂದು ಹೇಳಲಾಗಿದೆ. ಬಹಳ ಧೈರ್ಯದಿಂದ ರಣಾಂಗಣದ ಉದ್ದಗಲಕ್ಕೂ ಸಂಚರಿಸುತ್ತಿದ್ದರೆಂದು ಧರ್ಮಯೋಧರಿಗೆ ನೀರು ಕುಡಿಸುವುದು, ಅವರಿಗೆ ಆಯುಧಗಳನ್ನು ಎತ್ತಿಕೊಡುವುದು, ಗಾಯಾಳುಗಳಿಗೆ ಶುಶ್ರೂಷೆ ನೀಡುವುದು, ಹುತಾತ್ಮರನ್ನು ಮತ್ತು ತೀವ್ರ ಗಾಯಗೊಂಡವರನ್ನು ಮದೀನಕ್ಕೆ ಕರೆದೊಯ್ಯುವುದು, ಸೈನಿಕರನ್ನು ಹುರಿದುಂಬಿಸುವುದು, ಶತ್ರುಗಳ ಆಕಸ್ಮಿಕ ದಾಳಿ ಮತ್ತು ಯುದ್ಧ ತಂತ್ರಗಳ ಕುರಿತು ಇಸ್ಲಾಮೀ ಸೇನೆಗೆ ಮಾಹಿತಿ ಒದಗಿಸುವುದು ಮುಂತಾದ ಕಾರ್ಯಗಳನ್ನು ಅವರು ಯುದ್ಧದ ಕಣದಲ್ಲಿದ್ದು ನಿರ್ವಹಿಸುತ್ತಿದ್ದರು.

ಅಲ್ಲಾಹನ ಸಂದೇಶವಾಹಕರ(ﷺ) ಮೇಲೆ ಅವರು ಅಪಾರ ಪ್ರೀತಿ ಇಟ್ಟುಕೊಂಡಿದ್ದರು. ಅವರ ವಿರುದ್ಧ ಯಾವುದೇ ಒಂದು ಮಾತು ಅಥವಾ ಕೃತಿಯನ್ನು ಅವರು ಸಹಿಸುತ್ತಿರಲಿಲ್ಲ. ಪ್ರವಾದಿ(ﷺ) ರವರು ಕೂಡಾ ಅವರ ಕಡೆಗೆ ಗಮನ ಹರಿಸುತ್ತಿದ್ದರು.

ಒಮ್ಮೆ ಅವರು ಒಂದು ಜೋಳಿಗೆಯಲ್ಲಿ ಖರ್ಜೂರವನ್ನು ಪ್ರವಾದಿ (ﷺ) ರವರಿಗೆ ಉಡುಗೊರೆಯಾಗಿ ತಂದು ಸ್ವೀಕರಿಸುವಂತೆ ವಿನಂತಿಸಿದರು. ಪ್ರವಾದಿ(ﷺ) ಅದನ್ನು ಸ್ವೀಕರಿಸಿಕೊಂಡರು ಮತ್ತು ಅದಕ್ಕೆ ಬದಲಾಗಿ ಬಂಗಾರದ ಒಂದು ಆಭರಣವನ್ನು ಅವರಿಗೆ ನೀಡಿದರು.

ಒಮ್ಮೆ ಪ್ರವಾದಿ(ﷺ) ಅವರ ಮನೆಗೆ ಹೋದರು. ಆಗ ವುದೂ ನಿರ್ವಹಿಸಲು ನೀರು ಕೇಳಿದರು. ರಬೀಅ್(ؓ) ರವರು ನಿಂತು ನೀರು ಸುರಿಸಿಕೊಟ್ಟು ಪ್ರವಾದಿ(ﷺ) ರವರಿಗೆ ವುದೂ ನಿರ್ವಹಿಸಲು ನೆರವಾದರು.

ರಬೀಅ್(ؓ) ರವರು ಅವರ ಧರ್ಮನಿಷ್ಠೆ, ಆತ್ಮಾರ್ಥತೆ, ವಿಶ್ವಾಸ ಮತ್ತು ಸ್ಫೂರ್ತಿಗಾಗಿ ಸ್ಮರಿಸಲ್ಪಡುತ್ತಾರೆ. ಈ ಕುರಿತಾಗಿ ಒಂದು ಉದಾಹರಣೆಯನ್ನು ಇಲ್ಲಿ ನೀಡುತ್ತಿದ್ದೇವೆ. ಅಬೂ ರಬೀಅ ಎಂಬ ಓರ್ವ ವ್ಯಕ್ತಿ ಇದ್ದರು. ಅವರ ಪತ್ನಿಯ ಹೆಸರು ಅಸ್ಮಾ ಬಿಂತ್ ಮಖ್ರಮ. ಅವರು ಕುರೈಶ್ ಗೋತ್ರಕ್ಕೆ ಸೇರಿದವರಾಗಿದ್ದರು ಮತ್ತು ಸುಗಂಧ ದ್ರವ್ಯವನ್ನು ಮಾರುತ್ತಿದ್ದರು. ಒಮ್ಮೆ ಅವರು ಸುಗಂಧ ದ್ರವ್ಯ ಮಾರಾಟ ಮಾಡುತ್ತಾ ಕೆಲವು ಸ್ತ್ರೀಯರೊಂದಿಗೆ ರಬೀಅ್ ಬಿಂತ್ ಮಊರ್ಝ್(ؓ) ರವರ ಮನೆಗೆ ಬಂದರು ಮತ್ತು ಅವರ ಹೆಸರು ವಿವರ ಕೇಳಿ ತಿಳಿದುಕೊಂಡರು.

ಬೀಅ್(ؓ) ರವರ ತಂದೆ ಬದ್ರ್‌ನ ಮೈದಾನದಲ್ಲಿ ಕುರೈಷರ ಸರದಾರ ಅಬೂಜಹಲನನ್ನು ಹತ್ಯೆಗೈದಿದ್ದರು. ರಬೀಅ್(ؓ) ರವರ ಕುರಿತು ಅರಿತುಕೊಂಡ ನಂತರ ಅಸ್ಮಾ ಬಿಂತ್ ಮಖ್ರಮರವರು ತುಸು ಆಕ್ರೋಶಗೊಂಡು “ನೀವು ನಮ್ಮ ಸರದಾರರನ್ನು ಹತ್ಯೆ ಮಾಡಿದವರ ಪುತ್ರಿಯೇ?” ಎಂದು ಕೇಳಿದರು.

ರಬೀಅ್ ಬಿಂತ್ ಮಊರ್ಝ್(ؓ) ರವರಿಗೆ ಅಬೂಜಹಲನನ್ನು ಸರದಾರನೆಂದು ಉಲ್ಲೇಖಿಸಿ ಹೇಳಿದ ಮಾತು ಪಥ್ಯವಾಗಲಿಲ್ಲ. ಅವರು ತಕ್ಷಣ ಉತ್ತರಿಸಿದರು. “ಸರದಾರನಲ್ಲ ಗುಲಾಮನನ್ನು ಹತ್ಯೆಗೈದವರ ಪುತ್ರಿ.”

ಅಸ್ಮಾ ಅಬೂಜಹಲನನ್ನು ಅಪಮಾನ ಮಾಡಿದ್ದನ್ನು ಸಹಿಸಿಕೊಳ್ಳಲಾರದೆ ಕೋಪದಿಂದ ಹೇಳಿದರು. “ನನಗೆ ನಿಮ್ಮೊಂದಿಗೆ ವ್ಯವಹಾರ ನಿಷಿದ್ಧವಾಗಿದೆ.”

ರಬೀಅ್(ؓ) ಅಷ್ಟೇ ಖಾರವಾಗಿ ಉತ್ತರಿಸಿದರು. “ನನಗೂ ನಿಮ್ಮೊಂದಿಗೆ ವ್ಯವಹಾರ ನಿಷಿದ್ಧವಾಗಿದೆ. ನನಗೆ ನಿಮ್ಮ ಸುಗಂಧ ದ್ರವ್ಯದಿಂದ ಅತ್ಯಂತ ದುರ್ಗಂಧವು ಮೂಗಿಗೆ ಬಡಿಯುತ್ತಿದೆ. ಅಲ್ಲಾಹನ ಸಂದೇಶವಾಹಕರ(ﷺ) ಶತ್ರುಗಳೊಂದಿಗೆ ಯಾವುದೇ ರೀತಿಯ ಸಂಪರ್ಕ ವ್ಯವಹಾರವನ್ನು ನಾನು ಇಷ್ಟಪಡುವುದಿಲ್ಲ.”

ಪ್ರವಾದಿ(ﷺ) ರವರ ಮುಖಾರವಿಂದವನ್ನು ಹೆಚ್ಚಿನ ಚರಿತ್ರೆಕಾರರು ಉಲ್ಲೇಖಿಸಿದ್ದಾರೆ. ಅತ್ಯಂತ ಶ್ರೇಷ್ಠ ಪದ ಮತ್ತು ಹೋಲಿಕೆಗಳನ್ನು ಅವರೆಲ್ಲರೂ ಅದಕ್ಕೆ ಬಳಸಿದ್ದಾರೆ. ರಬೀಅ್ ಬಿಂತ್ ಮಊರ್ಝ್ (ؓ) ರೊಂದಿಗೆ ಅಬೂ ಉಬೈದ ಬಿನ್ ಮುಹಮ್ಮದ್ ಬಿನ್ ಅಮ್ಮಾರ ಬಿನ್ ಯಾಸರ್ ರವರು ಈ ಕುರಿತು ವಿಚಾರಿಸಿದಾಗ ಅವರು ಹೇಳಿದ್ದರು.

يَا بُنَيَّ! لَوْ رَأَيْتَهُ لَرَأَيْتَ الشَّمْسَ طَالِعَةً.

“ಮಗನೇ! ನೀನೇನಾದರೂ ಅವರನ್ನು ಕಂಡಿದ್ದರೆ ಸೂರ್ಯ ಉದಯವಾಗುವುದನ್ನು ಕಂಡೆ ಎಂದು ನೀನು ತಿಳಿದುಕೊಳ್ಳುತ್ತಿದ್ದೆ.”

ರಬೀಅ್ ಬಿಂತ್ ಮಊರುಝ್(ರ) ಸ್ವಾಭಿಮಾನಿ ಮತ್ತು ಆತ್ಮವಿಶ್ವಾಸ ತುಂಬಿದ್ದ ಸ್ತ್ರೀಯಾಗಿದ್ದರು. ಆದ್ದರಿಂದಲೇ ಅವರು ಎದುರಾಗುವ ಯಾವುದೇ ಪ್ರಶ್ನೆಗೆ ತಟ್ಟನೆ ಉತ್ತರ ನೀಡುತ್ತಿದ್ದರು ಮತ್ತು ಮಾತಿನ ರೀತಿಯನ್ನು ಅತ್ಯಂತ ಸೂಕ್ಷ್ಮ ಹಂತಕ್ಕೆ ಮತ್ತು ಅಂತಿಮ ಆಯಾಮಕ್ಕೆ ತಲುಪಿಸುತ್ತಿದ್ದರು. ಇದೇ ಸ್ವಭಾವವು ಅವರನ್ನು ಅವರ ಪತಿಯಿಂದ ಬೇರ್ಪಡುವಂತೆ ಮಾಡಿತು. ಯಾವುದೋ ಒಂದು ವಿಷಯದ ಕುರಿತು ಪತಿಯೊಂದಿಗೆ ಮನಸ್ತಾಪ ಬಂದಾಗ “ನನ್ನೊಂದಿಗೆ ಏನೇನು ವಸ್ತುಗಳಿವೆಯೋ ಅದನ್ನೆಲ್ಲ ನೀವು ಪಡೆದುಕೊಳ್ಳಿ, ನನ್ನನ್ನು ನಿಮ್ಮಿಂದ ಬೇರ್ಪಡಿಸಿ ಬಿಡಿ” ಎಂದು ಹೇಳಿಬಿಟ್ಟರು. ಪತಿ ಒಪ್ಪಿಕೊಂಡರು. ಇವರು ತನ್ನೆಲ್ಲಾ ವಸ್ತುಗಳನ್ನು ಪತಿಗೆ ಒಪ್ಪಿಸಿದರು. ಏಕೆಂದರೆ ಅದುವೇ ಅವರ ಬೇರ್ಪಡುವಿಕೆಯ ಷರತ್ತು ಆಗಿತ್ತು. ಕೇವಲ ಒಂದು ಕಮೀಸ್ ಉಳಿದಿತ್ತು. ಪತಿ ಅದನ್ನು ಕೇಳಿದರು. ಮಾತ್ರವಲ್ಲ, ಅದಕ್ಕಾಗಿ ಅವರು ಮೂರನೇ ಖಲೀಫ ಉಸ್ಮಾನ್(ರ) ರವರ ನ್ಯಾಯಾಲಯದಲ್ಲಿ ದೂರು ದಾಖಲಿಸಿದರು. ಏಕೆಂದರೆ ಷರತ್ತು ಪ್ರಕಾರ ಪತಿಯ ನಿಲುವು ಸರಿಯೇ ಇತ್ತು. ಅದೇ ಪ್ರಕಾರ ಉಸ್ಮಾನ್(ರ) ರಬೀಅ್ ಷರತ್ತು ಪೂರ್ತೀಕರಿಸಬೇಕೆಂದು ತೀರ್ಪಿತ್ತರು ಮತ್ತು ಪತಿಯೊಂದಿಗೆ ಹೇಳಿದರು. “ನೀವು ಇವರ ಬಳಿಯಲ್ಲಿ ಇನ್ನೇನಾದರೂ ಉಳಿದುಕೊಂಡಿದ್ದರೆ ಅದನ್ನೂ ಪಡೆದುಕೊಳ್ಳಬಹುದು.”

ಹಾಫಿಝ್ ಇಬ್ನ್ ಹಜರ್(ರ) ತನ್ನ ಇಸಾಬದಲ್ಲಿ ಈ ಘಟನೆಯು ಹಿಜರಿ 35ರಲ್ಲಿ ನಡೆಯಿತೆಂದು ಉಲ್ಲೇಖಿಸಿದ್ದಾರೆ.

ರಬೀಅ್ ಬಿಂತ್ ಮಊರುಝ್(ರ) ಅತ್ಯಂತ ವಿದ್ಯೆ ಮತ್ತು ಬುದ್ಧಿಯಿರುವ ಮಹಿಳೆಯಾಗಿದ್ದರು. ಅವರು ಪ್ರವಾದಿ(ﷺ) ರವರಿಂದ 21 ಹದೀಸ್ ವರದಿ ಮಾಡಿರುತ್ತಾರೆ. ಅಬ್ದುಲ್ಲ ಬಿನ್ ಅಬ್ಬಾಸ್(ರ) ಮತ್ತು ಇಮಾಮ್ ಝೈನುಲ್ ಆಬಿದೀನ್‌ರಂತವರು ಕೆಲವು ಸೂಕ್ಷ್ಮವಾದ ಧಾರ್ಮಿಕ ವಿಷಯಗಳ ವಿಷದೀಕರಣಕ್ಕಾಗಿ ಇವರನ್ನು ಸಂಪರ್ಕಿಸುತ್ತಿದ್ದರು. ಇವರಿಂದ ಹದೀಸ್ ಉಲ್ಲೇಖಿಸಿದವರಲ್ಲಿ ಸುಲೈಮಾನ್ ಬಿನ್ ಯಸಾರ್, ಅಬೂ ಸಲ್ಮಾ ಬಿನ್ ಅಬ್ದುರ್ರಹ್ಮಾನ್, ಆಯಿಶಾ ಬಿಂತ್ ಅನಸ್ ಬಿನ್ ಮಾಲಿಕ್, ಉಬಾದ ಬಿನ್ ವಲೀದ್ ಮತ್ತು ಅಬ್ದುಲ್ಲ ಬಿನ್ ಮುಹಮ್ಮದ್ ಬಿನ್ ಅಕೀಲ್ ಮುಂತಾದ ದಿಗ್ಗಜರು ಸೇರಿದ್ದಾರೆ.

ಇವರ ಸಂತಾನಗಳ ಕುರಿತು ಅವರಿಗೆ ಮುಹಮ್ಮದ್ ಎಂಬ ಪುತ್ರರಿದ್ದರೆಂದು ಮಾತ್ರ ತಿಳಿದುಬರುತ್ತದೆ. ಅವರು ಯಾವಾಗ ನಿಧನರಾದರೆಂದು ಯಾವುದೇ ಚರಿತ್ರೆ ಗ್ರಂಥದಲ್ಲಿ ಮಾಹಿತಿ ಲಭಿಸುವುದಿಲ್ಲ. ■

---

*28 ನೇ ಪುಟದಿಂದ*

## ...ಒಳಿತಿನ ಮೂಲಕ ಪರೀಕ್ಷಿಸಬಹುದು!

ಎಂದು ನಿಮ್ಮ ರಬ್ಬ್ ಘೋಷಿಸಿದ ಸಂದರ್ಭ.” (ಕುರ್‌ಆನ್ 14:7)

ಪ್ರವಾದಿ(ﷺ) ಯವರು ಹೇಳಿದರು:

«إِنَّ اللَّهَ لَيَرْضَى عَنِ الْعَبْدِ أَنْ يَأْكُلَ الْأَكْلَةَ فَيَحْمَدَهُ عَلَيْهَا أَوْ يَشْرَبَ الشَّرْبَةَ فَيَحْمَدَهُ عَلَيْهَا».

“ದಾಸನು ಆಹಾರವನ್ನು ಸೇವಿಸಿ ಅದಕ್ಕಾಗಿ ಕೃತಜ್ಞತೆ ಸಲ್ಲಿಸುವುದನ್ನು ಮತ್ತು ಪಾನೀಯವನ್ನು ಸೇವಿಸಿ ಅದಕ್ಕಾಗಿ ಕೃತಜ್ಞತೆ ಸಲ್ಲಿಸುವುದನ್ನು ಅಲ್ಲಾಹು ಇಷ್ಟಪಡುತ್ತಾನೆ.”

ಅಲ್ಲಾಹು ನಿನ್ನನ್ನು ದುರಂತ ಸನ್ನಿವೇಶಗಳ ಮೂಲಕ ಪರೀಕ್ಷಿಸಿದರೆ ನೀನು ಕೋಪಿಸಿಕೊಳ್ಳಬಾರದು, ದುಃಖಿಸಬಾರದು ಮತ್ತು ಬೇಸರಪಡಬಾರದು. ವಿಷಯ ನಾನು ನಿಮಗೆ ತಿಳಿಸಿದಂತೆಯೇ ಆಗಿದೆ. ಅಂದರೆ ಪರೀಕ್ಷೆಯು ಒಳಿತಿನ ಮೂಲಕವೂ ಉಂಟಾಗುತ್ತದೆ ಮತ್ತು ಪರೀಕ್ಷೆಯು ಕೆಡುಕಿನ ಮೂಲಕವೂ ಉಂಟಾಗುತ್ತದೆ.” (ಫತಾವಾ ನೂರುನ್ ಅಲದ್ದರ್ಬ್)

ಅಲ್ಲಾಹು(ﷻ) ಕೃತಜ್ಞತೆ ಸಲ್ಲಿಸುವವರನ್ನು ಇಷ್ಟಪಡುತ್ತಾನೆ. ಅಲ್ಲಾಹು(ﷻ) ಹೇಳುತ್ತಾನೆ:

﴿وَإِن تَشْكُرُوا يَرْضَهُ لَكُمْ﴾

“ನೀವು ಕೃತಜ್ಞತೆ ಸಲ್ಲಿಸವುದಾದರೆ ಅಲ್ಲಾಹು ಅದನ್ನು ಇಷ್ಟಪಡುತ್ತಾನೆ.” (ಕುರ್‌ಆನ್ 39:7) ■